# ಶ್ರೀರಾಮ ಪರೀಕ್ಷಣಂ

★

ಗಳೂರು

**ಕರ್ಣಾಟಕ ಪ್ರಕಟನಾಲಯ**

೧೯೪೫

## ಈ ಲೇಖಕರ ಇತರ ಗ್ರಂಥಗಳು

---

ಕವಿತೆ:



ವಸಂತ ಕುಸುಮಾಂಜಲಿ
ನಿವೇದನ
ಉಮರನ ಒಸಗೆ
ಮಂಕುತಿಮ್ಮನ ಕಗ್ಗ



ನಾಟಕ:

ವಿದ್ಯಾರಣ್ಯ ವಿಜಯ
ತಿಲೋತ್ತಮೆ
ಕನಕಾಲುಕಾ
ಮ್ಯಾಕ್ಬೆತ್

ಜೀವನ ಚರಿತ್ರೆ:

ದಿವಾನ್ ರಂಗಾಚಾರ್ಲು
ಗೋಪಾಲಕೃಷ್ಣ ಗೋಖಲೆ
ವಿದ್ಯಾರಣ್ಯರ ಚರಿತ್ರೆ ಮತ್ತು ಕಾಲ
ವಿದ್ಯಾರಣ್ಯರ ಸಮಕಾಲೀನರು

ಇತರ:

ಜೀವನ ಸೌಂದರ್ಯ ಮತ್ತು ಸಾಹಿತ್ಯ
ವೃತ್ತ ಪತ್ರಿಕೆಗಳು

—ಮೊದಲಾದುವು.



ಶ್ರೀರಾಮ ದೇವರು

(ಒಂದು ಪುರಾತನ ಪ್ರತಿಮೆ)

# ಶ್ರೀರಾಮ ಪರೀಕ್ಷಣಂ

ಲೇಖಕ

ಡಿ. ವಿ. ಗುಂಡಪ್ಪ

ಬೆಂಗಳೂರು

ಕರ್ಣಾಟಕ ಪ್ರಕಟನಾಲಯ

೧೯೪೫

## ಅರ್ಪಣೆ

# ದೇ. ರಾಮಣ್ಣನವರಿಗೆ

ಮಕ್ಕಳು ತನಗಿಲ್ಲೆನ್ನುವ |
ದುಕ್ಕಕ್ಕೆಡೆಗುಡದೆ ಸೋದರರ ಮನೆಗೀತಂ ||
ದಿಕ್ಕಾಗಿ, ಸಲಹಿ ಬಡವರ |
ನಕ್ಕರೆಯಿಂ, ಬೆಳಕನೊಂದನೆಂಟಾಗಿಸಿದಂ ||

ಎರೆಯುತ್ತೊಲವಿನ ಸೊದೆಯಂ |
ಪೊರೆಯುತೆ ತಾಂ ಪೊಮ್ಮನೆಳೆಯ ಬಾಳ್ವಿಯ ಪಯಿರಂ||
ಒರೆಯುತೆ ರಾಮಾಯಣಮಂ |
ಗುರುವಾದಂ ಸಂಪ್ರದಾಯದೊಳ್ ಕಿರಿಯಜ್ಜಂ ||

ಸರಳದ ಶಾಂತಿಯ ಬಾಳದು |
ಹರಿಹರ ಗೋ ವಿಪ್ರಸೇವೆಯೊಳ್ ಶಿಶುವಚದೊಳ್ ||
ಹರುಷವ ಕಂಡಾ ಪಿರಿಯನ್ |
ಪರಸನೆ ತನ್ನೊರ್ವನೊರೆಯೆ ಪುಣ್ಯದ ಕಥೆಯಂ ||

**ಡಿ. ವಿ. ಜಿ.**

# ವಿಷಯ ಸೂಚಿ



## ಚಿತ್ರಪಟ

ಆಶ್ಚರ್ಯಮಿದಮಾಖ್ಯಾನಂ ಮುನಿನಾ ಸಂಪ್ರಕೀರ್ತಿತಂ ।
ಪರಂ ಕವೀನಾಮಾಧಾರಂ ಸರ್ವಶ್ರುತಿಮನೋಹರಂ ॥

—ಶ್ರೀಮದ್ವಾಲ್ಮೀಕಿ ರಾಮಾಯಣ,
ಬಾಲಕಾಂಡ, ೪ : ೨೪-೨೫

# ಅಹಲ್ಯೋದ್ಧಾರ

## ಶ್ರೀಮದ್ವಾಲ್ಮೀಕಿ ರಾಮಾಯಣ

### ಬಾಲಕಾಂಡ, ಸರ್ಗ ೪೮–೪೯

# ಶ್ರೀರಾಮ ಪರೀಕ್ಷಣಂ

## ೧. ಅಹಲ್ಯೆಯ ಪ್ರಶ್ನೆ

(ಕಂದ)

ಏನಚ್ಚರಿಯೋ ಗೌತಮ |
ಮೌನಿ ಪರಿತ್ಯಕ್ತ ವನದೊಳಂದಾದುದಹಾ ! ||
ಭೂನಭಗಳೊಲಿದು ಕೇಳ್ವಾ |
ಖ್ಯಾನಕಮದು ಪುಣ್ಯ ಪಾಪ ದರ್ಶಕ ಮುಕುರಂ || ೧

ದಾಶರಥಿರತ್ನನಂ ಮುನಿ |
ಕೌಶಿಕ ಗುರು ಕರೆತರುತ್ತಯೋಧ್ಯಾಪುರಿಯಿಂ ||
ಪ್ರಾಸಂಗಿಕ ಕಥೆಗಳಿನಾ |
ಯಾಸವ ನೀಗಿಸುತೆ ಪಯಣಗೆಯ್ದಾ ದಿವಸಂ || ೨

ಜನಶೂನ್ಯದಾ ಮಹಾಶ್ರಮ |
ದನಿಲಂ ರಘುವರನ ಪುಣ್ಯಗಂಧವನೊಯ್ಯಲ್ ||
ಮಿನುಗಿತದೊಂದಸ್ಫುಟ ಮಾ |
ನಿನಿರೂಪಂ ಮೊರೆಯಿಡುತ್ತಲಾರ್ತಸ್ವರದಿಂ || ೩

ವ|| ಆಗಳತಿವಿಸ್ಮಿತನಾದ ಶ್ರೀರಾಮಚಂದ್ರನಾ ಮಹಾದ್ಭುತವ ದೇನೆಂದು ಗುರು ವಿಶ್ವಾಮಿತ್ರನಂ ಬೆಸಗೊಳಲಾ ಮುನೀಂದ್ರ ನಿಂತೆಂದಂ— ೪



ನೋಡತ್ತಲ್ ಇನಕುಲಾಗ್ರಣಿ ।
ಮೋಡದಿ ಕಾಣಿಪಳಹಲ್ಯೆ ಗೌತಮನಿನಿಯಳ್ ॥
ಗಾಡಿಯೊಳಿವಳೆಣೆಯಿಲ್ಲೆನೆ ।
ಮಾಡಿದನಜನಿವಳನೊಂದು ವಿಕಟಾಶಯದಿಂ ॥ ೫

ವ॥ ಇಂತಾ ಮಹರ್ಷಿಯರುಪಿದ ಬಳಿಕ್ಕಾ ದೆಸೆಯಿಂ ಕೇಳ
ಲ್ಬಂದ ಮೊರೆವಾತದೆಂತೆನೆ— ೬

ತಂದೆ ಬಂದೆಯ, ಪತಿತಬಂಧು ಬಂದೆಯ, ಕೃಪೆಯನ್
ಇಂದು ತಂದಿಹೆಯ ಕೌಸಲೆಯ ಕಂದಾ ।
ಸಂದ ದುರಿತವ ಹರಿಸೆ, ಬೆಂದ ಹರಣವ ತಣಿಸೆ
ಬಂದಿಹೆಯ ಪುಣ್ಯನಿಧಿ ಕರುಣೆಯಿಂದ।
ಕಾದು ಸಾಸಿರ ಯುಗವ, ಕಾದೆದೆಯ ಬೇವಸವ
ಸೈಸಿಹೆನು ನಿನ್ನ ಕಾಣ್ಬಾಸೆಯಿಂದ ।
ನೋಡು ದೊರೆ ಎನ್ನಿರವ, ನೀಡಿಂದು ಕನಿಕರವ
ಕಡೆಹಾಯಿಸೆನ್ನನೀ ಕಲುಷದಿಂದ ॥

ವಂದಿಪೆನೆ? ನಿನ್ನಡಿಯ ಸೋಂಕಲ್ಕೆ ಶುಚಿತೆಯಿಲ್ಲ।
ಸಂದರುಶಿಪೆನೆ? ಎನ್ನ ಕಂಗಳೊಳು ಕಾಂತಿಯಿಲ್ಲ ।
ದಂದುಗವ ಬಣ್ಣಿಪೆನೆ? ಮನಸಿನಲಿ ಧೈರ್ಯವಿಲ್ಲ।
ಮುಂದೆ ಗತಿಯೇನೆನಗೆ? ಚರಣದಲಿ ಶರಣುದೋರೈ॥ ೭

ನಾಣಹುದು ತಂದೆ ಬಿನ್ನಯಿಸಲೆನ್ನಯ ಕತೆಯ
ಆತ್ಮದವನತಿಯ, ಸುಖಚಪಲಕೃತಿಯ ।
ಕಾಮನೆಯ ಬೇರ್ಗಳೆಲ್ಲಿಹುವರಸಲಂಜುವೆನು
ಹೊರಗೊ ಎನ್ನೊಳಗೊ ತನುವೊಳೊ ಮನದೊಳೋ ।
ವಿಪಿನ ವಾಸದಿನೇನು, ತಪದ ಶೋಷದಿನೇನು
ವ್ರತಚರ್ಯೆಯಿಂದೇನು, ಶ್ರುತಿಯಿನೇನು ।
ಪ್ರಕೃತಿ ನಿರ್ಮಿತಿಯೊಳೇ ವಿಷಕಣವ ಹುದುಗಿಸಿರೆ
ಋಷಿ ಸಧರ್ಮಿತೆಯೇನು, ವಂಶವೇನು ॥

ಚಂಚಲದ ರಕ್ತ ನಿಶ್ಚಲವಹುದೆ ಹೋಮ ವಿಧಿಯಿಂ ।
ಮಾಂಸದುಬ್ಬೆಗವನ್ ಆಶ್ರಮಪವನನ್ ಇಳಿಸಲಹುದೇಂ।
ಮಾನುಷ್ಯದಾಹವಂ ತೀರ್ಥಜಲ ತಣಿಸಲಹುದೇಂ ।
ತನುವು ಬಾಳ್ದಿರೆ ಮನಸು ಸತ್ತಪುದದೆಂತು ದೊರೆಯೇ॥ ೮

ಕಡಲಿನುರುಬನು ಸವರೆ ಕರೆಯ ಮಣಲಿಂದೇನು
ಸಿಡಿಲ ಬಿರುಬಿಗೆ ಕೊಡೆಯ ಹರಹದೇನು ।
ಒಳ್ಪೊಕ್ಕ ಮುಳ್ಮೊನೆಗೆ ಬಿಜ್ಜಣಿಗೆಯಿಂದೇನು
ಜೀವ ತಾಪಕೆ ತರ್ಕ ಯುಕ್ತಿಯೇನು ।
ಎಣ್ಣೆಯಲಿ ಜಿಡ್ಡೆನುತ್ತೆಳ್ಳ ತೊಳೆದೊಡದೇನು
ಬೇವು ಕಹಿಯೆಂದು ಪಾಲೆರೆದೊಡೇನು ।
ಮರಕೆ ಹಚ್ಚಡ ಹೊದಿಸೆ ಚಿಗುರೊಡೆಯದಿಹುದೇನು
ಮುಗಿಲ ಕರೆ ಕೇಳಿ ನವಿಲಾಡದೇನು ॥

ಅಸ್ಥಿಯೊಳೆ ನೆಲಸಿರ್ದು ರುಧಿರದೊಡವೆರೆದು ಪರಿದು ।
ಕಣ್ಕಿವಿಗಳಾಟ ಕೋಟಲೆಗಳಿಂ ಕೆರಳಿ ಮರಳಿ ।
ಎದೆಯ ಕುದಿಸುವ ಮಧುಕ ಕಣವ ವಿಧಿ ನಮ್ಮೊಳಿರಿಸಲ್
ಮರೆತದನು ಜೀವಿಗಳ ನಿಂದಿಪರು ಧರ್ಮವಿದರೇಂ ॥ ೯

ಮೋಹಗಳ ಬೀರುವುವು ಧರೆ ಗಗನಗಳ್ ಕಣ್ಗೆ
ಮಾಯೆ ಹೊಂಚುವಳೆಲ್ಲ ಜೀವಿ ಪಥವ ।
ಹೊಂದಳಿರ ಹೊಳಪಿನಲಿ ಹೂಮುಗುಳ ಹಸಿತದಲಿ
ಹಕ್ಕಿಗಳ ಹಾಡಿನಲಿ ಹೊಳೆಯುಲಿಯಲಿ ।
ಎರಳೆ ಕಣ್ಣೆಸಕದಲಿ ನುಣ್ಬುಟಿಯ ಪದಪಿನಲಿ
ಮೆಯ್ಯ ಮೆದು: ಸೋಂಕಿನಲಿ ನಸು ಬಿಸಿಯಲಿ ।
ಹೊಮ್ಮಿ ಹರಿವಾ ಮೋಹವಾಹಿನಿಗೆ ಬಲಿಯಾದೆ
ನೊಮ್ಮೆ ಎನ್ನಾತ್ಮಬಲ ಕುಗ್ಗಿದಂದು ॥

ಕಣ್ಣಮಾಟಕೆ ಸೋತು ಮಣ್ಣಿಗಾಂ ಬಿದ್ದೆನಯ್ಯ ।
ಪುಣ್ಯವಾವುದೊ ಪಾಪವಾವುದೋ ಕಾಣೆನಯ್ಯ ।
ಅಂದಿನಾ ಸಿಹಿಗಿನಿತುಯುಗ ಕಹಿಯನುಂಡೆನಯ್ಯ ।
ತಂದೆ ನೀಂ ಮರುಕದಿಂ ಬಗೆದೆನ್ನ ಕಾವುದಯ್ಯ ॥ ೧೦



ಮುನಿಪುತ್ರ ಋಷ್ಯಶೃಂಗ

(ಒಂದು ಪ್ರಾಚೀನ ಶಿಲ್ಪ)

ಪು. ೧೩]

ದಿವದ ನಲುಮೆಯ ಬೇಡಿ ಭುವಿ ಶಿರವ ಬಾಗಿಪುದು
ದಿವವಂಜಲಿಯ ನೆರೆವುದೊಲಿದು ಭುವಿಗೆ ।
ಒಂದು ಮುಗಿಲಿನ್ನೊಂದು ಬಳಿಸಾರೆ ನಗುನಗುತೆ
ನಲಿದಪ್ಪಿ ಬೆಳಗುವುದು ಮಿನುಗಿ ಜಗವ ।
ಕಡಲಿನಲೆ ತಿರೆಗೊಲವ ಬೀಸುತಿರೆ ತಿರೆ ಮೆಚ್ಚಿ
ಕಡಲಿಗೊಲವಿನ ತೊರೆಯ ಪರಿಯಿಸುವುದು ।
ಮೃಗ ವಿಹಗ ಜಾತಿಗಳು ನೆನೆದು ತಮ್ಮನಿಯರನು
ನುಣ್ದನಿಯಿನನುನಯಿಸಿ ಕರೆಯುತಿಹುವು ॥
ಭುವನವೆಲ್ಲವನಿಂತು ಕುಣಿಸುತಿಹ ಮೋಹಕಿಣ್ವಂ ।
ಮಾನಿಸರನೋರೊರ್ಮೆ ಕೆರಳಿಸದೆ ಬಿಡುವುದೆಂತು ।
ಋಷ್ಯಶೃಂಗರೆ, ದೇವ, ಬಗೆವೊಡೀ ನಿಜಕೆ ಸಾಕ್ಷಿ ।
ಕೌಶಿಕರುಮಾ ಕಿಣ್ವದುಮ್ಮಳವನರಿತರಲ್ತೆ ॥ ೧೧

ಸೃಷ್ಟಿಯಂತ್ರದ ಕಪಟ, ರಾಗ ಬೆಸನಗಳ ಘಟ
ರಕ್ತಮಾಂಸಗಳ ಹಟವೆಮ್ಮ ಪಾಡು ।
ಆ ಕಪಟಕೀಡಾಗಿ ಜೀವ ತಾಂ ಬಡವಾಗಿ
ಬೇಡುವುದು ಬೇರೊಂದು ಜೀವಸಖನ ।
ತನುವ ತನುವೆಳಸುವುದು ಮನವ ಮನವೆಳಸುವುದು
ನಿಲಲಾರರೊರ್ತನದೊಳಾರುಮಿಳೆಯೊಳ್ ।
ನಲ್ಮೆ ನೀಡುವಳೆಲ್ಲಿ ನೇಹಪಾಲಿಗನೆಲ್ಲಿ
ಎಲ್ಲಿ ಕೆಳೆಯೆನುತ ಬಾಯ್ಬಿಡುವರೆಲ್ಲರ್ ।
ಇಂತು ದುರ್ಬಲರಪ್ಪ ಮಾನಿಸರನಾರ್ದ್ರ ಹೃದಯರ್ ।
ನೀಮೆನಿತು ಕಲುಷಿತರೆನುತ್ತ ನೂಂಕುವರೆ ಜರೆದು ।
ಎನಿತು ಕಲುಷದ ಕಡಲ ಹಾಯ್ದಿಹಿರಿ ನೀಮೆನುತ್ತೆ ।
ಕೇಳ್ವ ಮರುಕಮೆ ಪೆರ್ಮೆ ನಿನ್ನಂಪದವರದಲ್ತೆ ॥ ೧೨

ಹವ್ಯಗಳನಾರ್ಗೆ ಕುಡುತಾರ್ತ್ತಣಿಯೆ ತಣಿಯುವವೊ
ಆ ದೇವಗಣವನಾಳ್ವಿಂದ್ರ ದೇವಂ ।
ನಿರ್ಜರರೊಳಗ್ರಿಮನು ನಿರುಪಮ ಪರಾಕ್ರಮನು
ಧರೆಗೆ ಮಳೆ ಬೆಳೆಗಳನಿತ್ತು ಕಾವ ವಿಭುವು ।
ನಂದನದಿ ರಂಭೋರ್ವಶಿಯರ ಶೃಂಗಾರ ರಸ
ಲಹರಿಯಲಿ ವಿಹರಿಪ್ಪ ವಿಭವಶಾಲಿ ।
ಮೂಜಗದಿ ರೂಪ ಸೌಂದರ್ಯದಿಂ ಪೆಸರಾಂತು
ಶಚಿಯ ಸೊಬಗನು ಭುಜಿಪ ಯೋಗಶಾಲಿ ॥

ಅಂತಪ್ಪನೀ ಮಾನುಷಿಯನರಸಿ ಬೇಡಿಬರಲು ।
ಸ್ವಾಂತವುಬ್ಬಿದುದಯ್ಯ ಮೇರೆಯಂ ಮರೆತುದಯ್ಯ ।
ಸ್ವಸ್ವರೂಪಾಭಿಮಾನದಿನೆ ನಾಂ ಕೆಟ್ಟೆನಯ್ಯ ।
ನೈಜವಿಕೃತತೆಯನಿದನರಿತು ನೀಂ ಕಾವುದಯ್ಯ ॥ ೧೩

ಕೋಮಲಾಂಗದ ಸೊಬಗು, ಕಾಯ ರೇಖೆಯ ಬೆಡಗು
ಕಣ್ಣಿನರಳಿದ ಬೆಳಕು, ಕೆಳೆಯ ಮೊಳಗು ।
ಮುಖವಿಲಾಸದ ಮೆರುಗು, ಮಧುರಕಂಠದ ಮೊಳಗು
ಮಂದಹಾಸದ ಮಿನುಗು, ಮಾತಿನೊಳಗು ।
ಈ ಪರಿಯ ಸಾಸಿರದ ಸೊಬಗುಗಳ್ ಜೀವಿತವ
ಸೆರೆವಿಡಿದು ಕಣ್ಕವಿಸಿ ಬೀಳಿಸುವುವು ।
ರೂಪಕಾಂತಿಗಳನೇತಕೆ ಧಾತನಿರಿಸಿಹನೊ
ಕಣ್ಮನಗಳೇಕೊ ಆ ಕುಟಿಲವೇಕೊ ॥

ದೇವ ನಾನರಿಯೆನೀ ಕೃತ್ರಿಮವಿಲಾಸ ಕತವ ।
ಅಬಲರ್ಗೆ ಸಬಲರಿಂ ಸಲುವ ಸಹನೆಯಲಿ ನೀನು ।
ಮನುಜಭಾವದ ಮುನಿಸು ಮಚ್ಚರಂಗಳನು ಕಳೆದು ।
ದೇವಭಾವದೊಳೆನ್ನನುದ್ಧರಿಸು ಕೌಸಲೇಯ ॥ ೧೪

ವ|| ಇಂತಾರ್ತ ಸ್ವರದಿನಾ ಗೌತಮಸತಿ ಸಂಪ್ರಾರ್ಥಿಸುತ್ತೆ
ಬಂದು ರಾಮಭದ್ರನ ಚರಣಂಗಳಂ ಪಿಡಿದು ಪ್ರಣಾಮಂ
ಗೆಯ್ದು ನಿಲ್ಲಲಾಗಳ್— ೧೫

(ಕಂದ)

ಮೊರೆ ನುಡಿಯನಾಲಿಸಿದ ರಘು |
ವರನ್ ಅನುಕಂಪಾರ್ದ್ರ ನೇತ್ರದಿಂ ಶಿಶು ತಾಯಂ |
ದರುಶಿಪವೊಲಹಲ್ಯೆಯನಾ |
ದರಿಸುತ್ತಿರೆ ನಭದಿ ವಾಸವಂ ಮೆಯ್ದೋರ್ದಂ || ೧೬

ವ|| ಅಂತಲ್ಲಿಗೈತಂದ ಮಹೇಂದ್ರಂ ಕುಸುಮಾಂಜಲಿಯನೆಸಗಿ
ಸ್ವಸ್ತಿಯನೊಸೆದು ರಾಮನಡಿಗೆರಗಿ ನಿಂತಿಂತೆಂದಂ— ೧೭

(ಸೀಸಪದ್ಯ)

ಆಲಿಸೈ ಸುಕುಮಾರ ಸುರಪ ಪತನದ ಕಥೆಯು
ಲೋಕಲೀಲಾನರ್ತದನೃಜು ಗತಿಯು |
ಪೇಳಲೆನಗದು ನಾಣ್ಚು, ಪೇಳದಿರಲೆದೆ ಕಿಚ್ಚು
ಕೇಳ್ವ ನಯದರ್ಶಿಗಾ ಚೋದ್ಯ ಪೆರ್ಚು |
ಪ್ರಕೃತಿ ಕಾರ್ಯಾಂಗಣದ ಕೂಟ ಯಂತ್ರದ ಕೀಲು
ಕುಂಚಿಕೆಯದೆಂತೊ ದೊರೆ ಪಿಡಿದುದೆನ್ನ |
ಸಕಲ ಜೀವಾಂತರಾಳಗಳ ನಿರ್ಭೇದಿಪಾ
ಪ್ರಣಯವೆಂಬಾ ಪ್ರಳಯ ದಹಿಸಿತೆನ್ನ ||
ಧರೆಯನಿನ್ನುಂ ಸೋಕದಾಗಸದ ಬಿಂದು ನೀನು |
ನರಕರಗಳಿನ್ನುಮುಂಟದ ಕುಂದ ಮುಕುಳ ನೀನು |
ಸೃಷ್ಟಿ ಚಕ್ರಕ್ಕೆ ಬಲಿಯಾದ ದುರ್ಬಲರು ನಾವು |
ಬಗೆದೀಗ ಕನಿಕರಿಸು ರಘುವೀರ ದುರಿತದೂರ || ೧೮

ಶಚಿಯ ಶುಚಿಯೊಲವೆನಗೆ ರುಚಿತೋರದವೊಲಾಯ್ತು
ಸುಲಭ ಲಭ್ಯದಿ ಕುತುಕ ಲವಣವಿರದೆ |
ಅಪ್ಸರೆಯುರುಪಚಾರ ತೊಳ್ತಿನೂಳಿಗವಾಯ್ತು
ಭುಕ್ತ ಭೋಗದಿ ನವ್ಯರಸತೆಯಿರದೆ |
ಅಪಹೃತಾನ್ನಾಕಾಂಕ್ಷೆ , ಗುಪ್ತ ಭೋಜನವಾಂಛೆ
ಮುಷಿತ ರಮಣೀತರ್ಷೆ ಸೆಳೆಯಿತೆನ್ನ |
ಚೌರ್ಯ ಶೃಂಗಾರಾನಲ ಜ್ವಾಲೆಯಿಂದೆನ್ನ
ದೇವತ್ವ ಪೂಜ್ಯತ್ವ ಬೂದಿಯಾಯ್ತು ||

ಪೇಳಲಿನ್ನೇನಿಹುದು ನಿರ್ಮಿಶ್ರ ಸತ್ತ್ವಮೂರ್ತಿ |
ಪಾಪ ಪಶ್ಚಾತ್ತಾಪ ಬಾಷ್ಪಮಾರ್ಜಿತರು ನಾವು |
ನಿನ್ನಂದದರ ಪುಣ್ಯ ವೀಕ್ಷೆಯಿಂದೆಮಗೆ ಮುಕ್ತಿ |
ಹರಸೆಮ್ಮ ಕರುಣೆಯಿಂ ರಘುವೀರ ದುರಿತದೂರ || ೧೯

ವ|| ಇಂತು ಸಹಸ್ರಾಕ್ಷನತಿ ನಮ್ರಭಾವದಿಂದಭ್ಯರ್ಥಿಸುತ್ತಿರೆ–

(ಕಂದ)

ನೀತಿವ್ಯಾಮಿಶ್ರವ ಪುರು |
ಹೂತನ ನಿಜವೃಜಿನ ಕಥನದೊಳ್ ಪರಿಕಿಸುವಾ ||
ಕೌತುಕುವ ರಾಮನಾಂತಿರೆ |
ಗೌತಮಮುನಿಯತ್ತಲೈದಿದಂ ಕಾಲಜ್ಞಂ || ೨೧

ವ|| ಮಹಾ ತೇಜಸ್ವಿಯಾದಾ ಮಹರ್ಷಿ ಶಾಂತಿಸೂಕ್ತಂಗಳ ನುದ್ಘೋಷಿಸುತ್ತೆ ನಿಂದು ಶ್ರೀರಾಮ ಪಾದಂಗಳಿಂಗಭಿವಂದಿಸಿ ಅರ್ಘ್ಯಪಾದ್ಯಂಗಳಿಂದರ್ಚಿಸಿ ಬಿನ್ನಪವನಿಂತುಗೆಯ್ದಂ— ೨೨



ಎನ್ನ ಕಥೆ, ಶುಭಮೂರ್ತಿ ಕೇಳು, ಮತ್ಸರದ ವೆಥೆ
ಜೀವಿತಾಂತದೃರ್ಷ್ಟಿಹೀನ ಚರಿತೆ |
ಆತ್ಮಗತಿಯಾತುರದಿ ಸಹಧರ್ಮಿತೆಯ ಮರೆತು
ಕಣ್ತಡೆಯ ತೊಟ್ಟ ಹಯವಾದೆನಯ್ಯ |
ಶಾಸ್ತ್ರನಿಷ್ಠೆಯ ಭರದಿ ಲೋಕಹೃದಯವ ಮರೆತು
ಕರ್ಮ ಕರ್ಕರ ಕಮಠವಾದೆನಯ್ಯ |
ಹೃದಯ ಕ್ಷುಧಾತುರದ ವಿಧಿಯಂತ್ರ ವಿಸ್ತರದ
ಚೋದಿತಂಗಳಿಗೆ ಕಿವುಡಾದೆನಯ್ಯ ||

ಗಾಣದೆತ್ತಿನವೊಲಡಿಯಿಟ್ಟೆಡೆಯೆ ತುಳಿದು ತುಳಿದು |
ಸಂಗಾತಿಯಿಂಗಿತವ ಲೆಕ್ಕಿಸದೆ ವಿರಸನಾಗಿ |
ವಿಷಮ ಘಟಿತವನು ಕಂಡೀರ್ಷ್ಯೆಯಿಂದುರಿದೆನಯ್ಯ |
ಕರ್ತವ್ಯವೇನೆನಗೆ ಕರುಣಾರ್ದ್ರ ರಾಮಭದ್ರ || ೨೩



ಆರಯ್ದೊಡೈಶ್ವರ್ಯಮುಂ ಪ್ರಕೃತಿಕಾರ್ಯದೊಳೊಂದು
ಸಾಧನಂ ತಾನಲ್ತೆ ಸರ್ವವಿಸ್ಮೃತಂ ।
ಪ್ರೇಮದೈಕಾಗ್ರ್ಯ ನೈರ್ಮಲ್ಯಗಳ ಕಾಯಲದು
ಸೃಷ್ಟಿ ನಿಯಮಿತ ಗೃಹದ್ವಾರ ಶುನಕಂ ।
ನೋಡು ನೈಸರ್ಗಿಕದ ಮಾಯೆ ನಮ್ಮೀ ಮೂವ
ರೊಳು ಮೂರು ಪರಿಯಾಟವಾಡಿಸಿಹುದು ।
ಏನು ಸೂತ್ರವೊ ದೇವ ವಿಶ್ವಸಂಧಾನಿಯದು
ಆರನಾರಿನೊ ಕುಲುಕಿ ಕುಣಿಸುತಿಹುದು ॥

ಕೇತಕೀ ಕುಸುಮುವನು ಕಾವ ಕಂಟಕದ ತೆರದಿ |
ಪ್ರೀತಿಯಂ ಸುತ್ತಿಹುದು ಮಚ್ಚರದ ಬೇಲಿಮುಳ್ಳು |
ಆದರಿಂದಲೀಕೆಗಾದಾ ಗಾಯ ಸಾಜವಲ್ತೆ |
ಈ ಪಾಳುಮನೆಯ ಮತ್ತೇಳಿಸಲ್ಕಹುದೆ ದೊರೆಯೇ|| ೨೪

ಮೆಯ್ವೆತ್ತ ಮರುಕವೋ, ಕಣ್ಗೆಸೆವ ಕನಿಕರವೊ
ಕೊನೆಗಂಡುದೀಗಳೆಮ್ಮೊಳಲು ನಿನ್ನಿಂ |
ತಪಿಸಿಹೆನು ನಾನುಮೀ ನೊಂದವಳವೊಲೆ ನೊಂದು
ಛಲವೇನುಮೆನಗಾಗದವಳೊಳಿನ್ನು |
ದುಃಖಾಶ್ರುವಿಂದೆ ದುಶ್ಚರಿತದ ಕಳಂಕಮಂ |
ತೊಳೆಯಲೆಂದಾ ಶಾಪವಿಟ್ಟೆನಂದು |
ಮರೆವೆನಿನ್ನಾದಿನವ ಮರೆತಾತ್ಮದುಬ್ಬೆಗವ
ಮರಳಿ ಮನೆಬಾಳ್ವೆಗನುವಪ್ಪೆನಿಂದು ||

ಹರಿಸೆಮ್ಮ ದುಷ್ಕೃತವ ದೇವ ಹರಸೆಮ್ಮ ಬದುಕ |
ಪರಿಪೂತೆಯೆನಿಸಿವಳನಭಯ ಕವಚವನು ನೀಡಿ |
ಕೌಶಿಕನೆ ಕಲ್ಯಾಣಮೂರುತಿಯ ದಾಶರಥಿಯ |
ನೀನಿತ್ತುಲ್ಲೈತರಿಸಿದುಪಕೃತಿಯನಳೆಯಲಳವೇಂ || ೨೫

ವ|| ಇಂತು ಗೌತಮ ಬ್ರಾಹ್ಮಣನುದೀರಿಸುತ್ತಿರಲ್— ೨೬

(ಕಂದ)

ಕೌಸುಮ ಶರತಂತ್ರದ ಪರಿ |
ಭಾಷೆಯನಾ ಮೂವರಿಂದಮಾಲಿಸಿ ರಾಮಂ ||
ಕೌಶಿಕನ ನೋಡುತಿಂತಾ |
ಶಾಸಿಸಿದಂ ಮನದೊಳಿರ್ಪರೊಂದೆನಿಸುವವೋಲ್ || ೨೭

ಗುರುವೇ ಮನದಾತುರದಿಂ ।
ದುರಿಯೊಳ್ ಬೀಳ್ದವರನುಳಿಸಲಾಗದೆ ಮತ್ತಂ ॥
ಕರೆಯಂ ಕಂಬನಿ ತೊಳೆಯದೆ ।
ಮರುಬಾಳ್ಕೆಯ ಶುಭದ ಯೋಗವವರಿಂಗಿರದೇಂ ॥ ೨೮

ವ॥ ಈ ವಚನದಿಂಗಿತವನರಿತ ವಿಶ್ವಾಮಿತ್ರನಾ ಮಹರ್ಷಿ ದಂಪತಿಗಳನುಮಾ ಪುರಂದರನುಮಂ ಸಂಬೋಧಿಸುತ್ತಿಂತೆಂದಂ— ೨೯

ಸಾಕಿನ್ನು ಸಂತಾಪ, ಶಮಿತವಾದುದು ಪಾಪ
ಸೊಗದಿ ಬೆಳಗುಗೆ ನಿಮ್ಮ ಮನೆಯ ದೀಪ ।
ಸ್ವಸ್ವಚಾರಿತ್ರ್ಯದ ಪರೀಕ್ಷೆಯಿಂ ನೀವೀಗ
ಳಾಗಿಹಿರಿ ಪುಟವಿಟ್ಟ ಮಿಸುನಿಯಂತೆ ।
ಜೀವ ನಿಶ್ಶ್ರೇಣಿಯಲಿ ಪುಣ್ಯ ಪದವಿಯನಡರೆ
ಪಾಪವಾದೀತೊಂದು ಮೆಟ್ಟಲಂತೆ ।
ಆತ್ಮಶೋಧದ ಶಿಖಿಯೊಳಳಲದರ ಸುಕೃತಮೇಂ
ರಣಭುವಿಯನರಿಯದರ ಶೌರ್ಯದಂತೆ ॥

ಬಾರೆಲೌ ತಾಯೆ ನೀಂ ಗೌತಮನ ಪದವ ಸಾರು ।
ಮುನಿವರ್ಯ ಸಂತವಿಡು ನೀನಿವಳ ಗತವ ಮರೆತು ॥
ಜನ್ಮಾಂತರವನಾಂತಿರಿಂದು ನೀಂ ರಾಮವರದಿಂ ।
ದುಸ್ಸಹದ ನಿಷ್ಕೃತಿಯಿನಿಂದ್ರನುಂ ಕ್ಷಮ್ಯನಾದಂ ॥ ೩೦



ಪತಿಯುಪೇಕ್ಷೆಯೆ ಬಿತ್ತ, ಸತಿಯಪೇಕ್ಷೆಯೆ ಮೊಳಕೆ
ಯವ್ವನವೆ ಶಿಖಿಯವಳ ಮನಸೆ ಮಯಣ ।
ವಶ್ಯಳಿವಳೆಂದು ಶಕ್ರನಿಗಾಯ್ತು ವಕ್ರಮತಿ
ಯದರಿಂದೆ ಋಷಿಜೀವ ಕೆಂಡವಾಯ್ತು ।
ಬ್ರಹ್ಮದಾಶನ ಗಾಳಕಿವರು ಮೀನಾದವರು
ಪ್ರಕೃತಿ ಸೂತ್ರದೆ ಕುಣಿದ ನಟಗಳಿವರು ।
ಲೋಗರೆಂತೀ ನಾಟಕವ ನೋಡಿ ನಗಲಹುದು
ಕಾಣರೇಂ ಸ್ಮರಕಿಣ್ವ ಬಲವನವರು ॥

ಕಡಲ ಕರೆಯಿಂದ ನೋೞ್ಪರ ಬೆಪ್ಪುಬೆರಗು ಮಾತೇಂ ।
ಮುಳುಗಿ ತಳಸೋಂಕಿ ಮೇಲ್ಬಂದಾತನಾಳವರಿತನ್ ।
ಮನ್ಮಥಾಬ್ಧಿಯ ಮಹಾವರ್ತನವ ಹಾಯ್ದು ಧೀರಂ ।
ಗೆಲುವನಜನೊಡ್ಡಿರುವ ಶಾಂತಿಯಾ ವೀರಪಣಮಂ॥ ೩೧

ಇನ್ನನುಸ್ಮರಿಸದಿರಿ ಕಳೆದ ದುಶ್ಚರಿತಗಳ
ಪಾತಕ ಸ್ಮರಣೆ ತಾಂ ಪ್ರೇತದಂತೆ ।
ಕೆರೆಯದಿರಿ ಕೆಣಕದಿರಿ ಹಳೆಯ ಗಾಯವ ನೆನೆದು
ಮರೆವಿನಲಿ ಹೊಸದೊವಲು ಬೆಳೆಯಲಹುದು ।
ಕಾಲ ತೈಲಾಂಜನಂ ನಿಮ್ಮಸುಗಳನು ತಣಿಸಿ
ಮಾಯಿಪುದು ಪಿಂತಾದ ಗಾಯಗಳನು ।
ಕರಿಯ ನೆನಪಿನ ನೆಳಲು ನಿಮ್ಮ ಬಿಳಿ ಬಾಳುವೆಯ
ಹೊಸ ಹಾದಿಗಳೊಳಡ್ಡ ಬೀಳದಿರಲಿ ॥

ಮರ್ತ್ಯಲೋಕದೊಳಿಲ್ಲ ಮನೆಗಳುಂ ಮಣ್ಣು ಕಲ್ಗಳ್ ।
ಎಲ್ಲ ಮನೆಗಳುಮೆಂದೊ ಬೀಳುವುವೆ ಅನಿತಿನಿತ್ತು ।
ಬೀಳ್ದ ಮನೆಯನು ಮರಳಿ ನಿಲ್ಲಿಪುದೆ ಪುರುಷಧರ್ಮಂ ।
ಶುದ್ಧರಾದಿರಿ ಲೋಕಯಾತ್ರೆಯಂ ಚರಿಸಿರಿನ್ನು ॥ ೩೨

ವ॥ ಇಂತು ಸಮಾಧಾನೋಕ್ತಿಯಂ ಗಾಧೇಯನಾಡುತ್ತಿರೆ–

(ಕಂದ)

ರಘುನಂದನಂಗೆ ನಮಿಸುತೆ ।
ಮಘವಂತನದೃಶ್ಯನಾದನಾ ದಂಪತಿಗಳ್ ॥
ಯುಗಯುಗದಳಲಿನ ಹೊರೆಯಂ ।
ಭಗವತ್ಸಾಕ್ಷಾತ್ಕಾರ ಸಂಭ್ರಮದಿ ಮುಳುಗಿಸಿದರ್ ॥ ೩೪

ವ|| ಬಳಿಕ್ಕಲಾ ಕೌಶಿಕ ಮುನಿವರನತ್ತಣಿಂ ಮಿಥಿಲಾಪುರಕ್ಕಾ ರಾಜನಂದನರೊಡನೆ ಪೊರಮಟ್ಟಾಗಳಾ ರಾಮಚಂದ್ರನಿಂತೆಂ ದೆದಂ— ೩೫

(ಕಂದ)

ಏನದ್ಭುತಮಂ ತೋರಿದೆ |
ಮೌನೀಂದ್ರನೆ ಕಂಡೆನದರೊಳ್ ಅಜವಿಲಸಿತಮಂ ||
ಮಾನವ ಜೀವಿತವೇಂ ಕಿರು |
ದೋಣಿಯಲಾ ಸೃಷ್ಟಿಸಿಂಧು ವೀಚೀವಶದೊಳ್ || ೩೬

ವ|| ಈ ನುಡಿಗೆ ಗಾಧೇಯಂ ತಲೆದೂಗುತ್ತಿಂತೆಂದಂ— ೩೭

ಒರೆದೆ ಯಥಾರ್ಥವ ರಾಘವ |
ನರನೆದೆಯೇಂ ರಾಗಮಾಯೆಗಳ ವಲ್ಮೀಕಂ ||
ಮರೆಯದೆ ನೀನೀ ಚರಿತೆಯ |
ಶರಣಾಗತಮಿತ್ರನಾಗಿ ಚರಿಪುದು ಭುವಿಯೊಳ್|| ೩೮

## ೨. ತಾರೆಯ ಪ್ರಶ್ನೆ

(ಕಂದ)

ವಾಲಿಯ ವಧಿಸಿದ ರಘುಕುಲ ।
ಮೌಲಿಯನಾ ತಾರೆ ಪತಿವಿಯೋಗ ವಿಷಾದ ॥
ಜ್ವಾಲೋದ್ದೀಪಿತ ಭಾಷಿತ ।
ಶೂಲಂಗಳಿನಿರಿದು ಕರುಳುಗಳ ನೆರಗೊಂಡಳ್ ॥ ೧

ವ॥ ಅದೆಂತೆನೆ— ೨

(ದ್ವಿಪದಿ)

ರಘುವೀರ ನಿನ್ನದೇಂ ಬೆಳ್ಜಸದ ಬಿತ್ತರವೊ! ।
ಅಘಶಂಕೆಯಿಲ್ಲದಿಹ ನರನು ಲೋಕೋತ್ತರವೊ! ॥ ೩

ನೀನಹಲ್ಯೆಯನುದ್ಧರಿಸಿದ ಪಾವನನಂತೆ! ।
ಮಾನಿನಿಯರಬಲತೆಯ ನೆನೆದು ಮರುಗುವನಂತೆ! ॥ ೪

ಗಾಧೇಯ ಕಥೆಯ ಗೂಢಗಳ ಬಲ್ಲವನಂತೆ! ।
ವೈಧಾತ್ರ ಧೂರ್ತ ತಂತ್ರಗಳ ಬಗೆದವನಂತೆ! ॥ ೫

ಆಹ, ನೀನೆಂತಪ್ಪ ಧರ್ಮ ಸೂಕ್ಷ್ಮವಿಚಾರಿ! ।
ಆಹ, ನೀನಲ್ತೆ ನರಕುಲದಿ ಪರಮೋದಾರಿ! ॥ ೬

ಪೇಳೀಗಲಾನೊಂದು ಸಂದಿಗವ ಕೇಳುವೆನು ।
ಬಾಳಿನಾಳದ ರಹಸ್ಯಗಳ ನೀಂ ಕಂಡವನು ॥ ೭

ಸ್ಮೃತಿಯೊಳಿರ್ಪುದೆ ನಿನಗೆ ವಾಲಿಯವಸಾನದಲಿ ।
ಪ್ರತಿಯ ನೀಂ ಪೇಳಿದುದು, ನಿನ್ನಾ ಪರೀಕ್ಷೆಯಲಿ? ॥ ೮

ನೆನೆದು ನೋಡಾನುಡಿಯ, ನಿನ್ನ ವಾಕ್ಚಾತುರಿಯ |
ಅಣಕಾಟಕೊಪ್ಪಬಹುದಾ ವಾದವೈಖರಿಯ || ೯

ಕಪಿವರನ ಮೃಗವೆಂದೆ ಕಪಿಸಖ್ಯವನೆ ಬಯಸಿ |
ನೃಪನೀತಿಗದು ಯುಕ್ತವೆನಿಸುವೊಡದಂತಿರಲಿ || ೧೦

ಧುರಕಿರದೆ ಮರೆಯಿಂದೆ ಕಳನವೊಲು ಶರವೆಸೆದೆ |
ನರರ ರಣಧರ್ಮಕದು ಸರಿಯಾದೊಡಂತಿರಲಿ || ೧೧

ಭೂಪ ತಂತ್ರಂಗಳಲಿ ಕೊಂಕು ಡೊಂಕುಗಳುಂಟು |
ಆಪತ್ತಿನಾತುರಕೆ ಸತ್ಯ ಬಾಗುವುದುಂಟು || ೧೨

ಸುಗ್ರೀವ ಸಾಹ್ಯಮಂ ನೀಂ ಗಳಿಪುಪಾಯದಲಿ |
ವಿಗ್ರಹವ ಸೋದರರೊಳುರುಬಿಸಿದೆ ಲೋಭದಲಿ || ೧೩

ಆದೊಡೆನಗೀಗಳೇಕಾ ರಾಜನಯ ತರ್ಕ ? |
ಸಾಧಿಸಿಹೆ ಗುರಿಯ ; ನಿನಗಾಗಲಿ ಶುಭೋದರ್ಕ || ೧೪

ಎನ್ನೆದೆಯನೀಗಳುರಿಸುವ ನಿನ್ನಯಾ ಮಾತು |
ಮನ್ನೆಯರ ಮಾತು, ತಂಗಿಯರ ಮಾನದ ಮಾತು || ೧೫

ವಾಲಿರುಮೆಯರ ಕೆಳೆಯ ಪರಿಕಿಪನು ನೀನೇನು? |
ಭೂಲೋಕದೆಲ್ಲೊಲವುಗಳನು ಬಗೆದಿಹೆಯೇನು? || ೧೬

ವಾನರನ ವಧಿಪ ನಯ ಬೇರೆಯೆಂದೊರೆದ ನೀಂ |
ಮಾನರ ಪ್ರಣಯ ನಯ ಬೇರೆಯೆಂದರಿಯೆಯೇಂ? || ೧೭

ಸೀತಾವಿಯೋಗ ದುಃಖದ ಭರದಿ ಹದಗೆಟ್ಟು |
ಜ್ಞಾತಿಭೇದದಿ ಪಕ್ಷಪೋಷಣೆಗೆ ಮನತೆತ್ತು || ೧೮

ಘಾತಿಸಿದೆ ವಾಲಿಯನು ಶಕ್ರಬಲಶಾಲಿಯನು |
ನೀತಿಲಕ್ಷ್ಯವ ತೊರೆದೆ ನೆನೆನೆನೆದು ಲಾಭವನು || ೧೯

*

ಎಂತಾದೊಡಂ ನಿನಗವಶ್ಯವೆನಿಸಿದ ಕೊಲೆಗೆ।
ಅಂತವುರ ಮರಿಯಾದೆಯನು ಮುರಿವ ನೆವನೇಕೆ? ॥ ೨೦

ಅಂದಿಂದ್ರನಂ ಕ್ಷಮಿಸಿ ದುಷ್ಕೃತವ ನೀಂ ಮರೆತೆ।
ಇಂದೇಕೆ ವಾಲಿಗಾ ಕ್ಷಮೆಯು ನೀಡದೆ ಕೊಂದೆ? ॥ ೨೧

ಅಂದಹಲ್ಯೆಗೆ ಮರುಕದಿಂ ಗತಿಯ ನೀಂ ತೋರ್ದೆ।
ಇಂದೇಕೆ ರುಮೆಯೊಳಾ ಮಾನ ದೃಷ್ಟಿಯ ತೊರೆದೆ? ॥ ೨೨

ಅಕ್ಕ ತಂಗಿಯರು ನಿನಗಿಲ್ಲದುದರಿಂ, ಹೃದಯ।
ಪಕ್ವಕವಕಾಶವಾಗದೆ ಕರಡುಕಟ್ಟಿಹೆಯು? ॥ ೨೩

ನಾರೀ ಮನೋಧರ್ಮವನು ನೀನದೇನರಿತೆ? ।
ಗೌರವವನುಳಿದಂಗೆ ತತ್ತ್ವದರಿವಾದೀತೆ? ॥ ೨೪

ಲೋಕಸಂಸ್ಥೆಯನರಿತು ಧರ್ಮವನು ಕಾಯುವೊಡೆ।
ಪ್ರಕೃತಿಯಂತ್ರದ ಚಕ್ರಕೀಲುಗಳ ನೋಡಿ ನಡೆ॥ ೨೫

ವ॥ ಇಂತಾ ಮಾನಿನೀಮಾನವಿಚಾರೆಯಾದಾ ತಾರೆ ಮೂದಲಿಸಲ್ ಶ್ರೀರಾಮಚಂದ್ರನಿಂತೆಂದಂ — ೨೬

ಅಲಿಪುದೆಲೌ ತಾಯೆ ನೀಂ ನೊಂದಳ್, ಅರಿತೆನದನ್
ಎನ್ನ ಮುಳ್ಳಾಗಿಸಿತು ದೈವವದಕೆ ।
ಸೀತೆಯುಗಲಿಕೆಯೇಕೆ, ಸುಗ್ರೀವನೆಡರೇಕೆ
ವಾಲಿ ಸಾಯಲಿಕೆನ್ನ ಬಾಣವೇಕೆ ।
ಆರೆತ್ತಲೆಸೆದ ಕಲ್ಲಾರ ತಲೆಯೊಡೆಯುವುದೊ
ಲೋಕ ಘಟನೆಗಳ್ ಎಲರು ಬೀಸುವಂತೆ ।
ಎನ್ನೆದೆಯ ನೀಂ ತೆರೆದು ನೋಡಲಾದೊಡೆ ನೋಡು
ನಿನ್ನ ಮರುಕವ ಮೀರ್ದ ಮರುಕವಲ್ಲಿ ॥
ರುಮೆಯ ನಿಂದಿಸಲೆನಗೆ ಮನಮೆಂದುಮಾದುದಲ್ಲ ।
ಎನ್ನಂತೆ ವಿರಹಿತನೊಳನುತಾಪ ಸಾಜಮಾಯ್ತು ।
ಮರಳಿ ನಾನೆನ್ನವಳ ಕಾಣ್ಬಾಸೆಯಿಂದ ನಡೆದೆಂ ।
ಅದು ಸತೀಗೌರವವನರಿಯದನ ನೀತಿಯೇನೌ ॥ ೨೭

ಅರಯ್ದು ನೋಡೆಲೌ ವಾಲಿ ಸುಗ್ರೀವರಾ
ವೈರದ ಮೂಲಾಪರಾಧವೇನು ।
ಅಸುರಗುಹೆಯಿಂ ವಾಲಿ ಮರಳಿಬಂದಾ ಕ್ಷಣದೊಳ್
ಅವನ ರಾಜ್ಯವನವನಿಗಿತ್ತು ತಮ್ಮನ್ ।
ದೊರೆತನದಿ ತಾನಿರ್ದುದಪತರ್ಕದಿಂದೆಂದು
ಬೇಡಿದೊಡಮಗ್ರಜಂ ಕ್ಷಮಿಸದಿರ್ದಂ ।
ದೀರ್ಘ ವಿದ್ವೇಷವನೆ ಕಿರಿಯನೊಳು ಸಾಧಿಸುತೆ
ಪೈತ್ರಸೂತ್ರವ ವಾಲಿ ಪರಿದು ಬಿಸುಟಂ ॥
ಅನುಜರೆನಗಿಹರಬ್ಬೆ, ಧನ್ಯ ನಾನ್ ಅನುಜರೊಲವಿಂ ।
ನಿನ್ನಿನಿಯನ್ ಅನುಜವಿಭವವ ಸಹಿಸಲರಿಯದಿರ್ದನ್ ।
ಭ್ರಾತೃಮಾತ್ಸರ್ಯದೊಳೆ ಮುಗಿದುದವನೆಲ್ಲ ಶೌರ್ಯಂ ।
ಅಂತು ನಿಜದೋಷದಿನೆ ವಾಲಿ ತಾಂ ದಂಡ್ಯನಾದನ್ ॥ ೨೮

ನಾಂ ಗೆಯ್ದು ದಂತಿರಲಿ; ಚಿಂತಿಸವನರ್ಹತೆಯ
ನೆಂತಾದೊಡಂ ನಿಗ್ರಹಾರ್ಹನವನು |
ದಂಡ್ಯನಲಿ ದಂಡಪಾತಕೆ ಸಾಧನೋಪಾಯ
ಬಾಣವೊ ಕೃಪಾಣವೋ ಅದರಿನೇನು |
ಮೃತ್ಯು ಬಳಿಸಾರ್ದಂಗೆ ಮಿತ್ರನುಸಿರುವ ಮಾತು
ನಿಷ್ಕೃತಿಯನುಪಶಮುವನೀಯುಲಲ್ತೆ |
ನಾನಂತು ವಾಲಿಸಖನಾಗಿ ಸಾಂತ್ವವನೊರೆದೆ
ನೀನದರ ಸರಿತಪ್ಪನೆಣಿಸಿ ಫಲವೇಂ ||

ಮೃತಿಯೊಂದಿ ವಾಲಿತಾನಿಂದ್ರನವೊಲಮರನಾದಂ |
ಸುಗ್ರೀವ ರಕ್ತಿಯಿಂ ರುಮೆ ಮತ್ತೆ ಮಾನ್ಯಳಾದಳ್ |
ನಿನ್ನ ಪೃಚ್ಛೆಯಿನೆನ್ನ ಮನವೀಗ ಶುದ್ಧವಾಯ್ತು |
ತಂಗಿ ನೀನೆನಗೆ ಗುರುವಾದೆ ನಾಂ ಮರೆಯೆನಿದನು|| ೨೯

(ಕಂದ)

ವಾನರನೇಂ ಮಾನವನೇಂ |
ದಾನವನೇನಾವನಕ್ಷಿಪಥಮುಂ ಸ್ವಗೃಹ ||
ಶ್ರೇಣೀ ಪರಿಮಿತಮದರಿಂ |
ನಾನುಂ ಕ್ಷಣಮಾತ್ರದೆಣಿಕೆಯಿಂ ವರ್ತಿಸಿದೆಂ || ೩೦

ಕ್ಷಣದಿಂ ಕ್ಷಣಕೆ ವಿಧಾತಂ |
ಕೊನೆತೋರದೆ ನೆಯ್ಯುವೀ ಕಥಾ ತಂತುಗಳೊಳ್ ||
ಮನುಜಂ ಪೂರ್ವಾಪರ ಶೋ |
ಧನೆ ಗೆಯ್ಯಲ್ ಪಟುವೆ? ಅವನ ಕಣ್ಣೆಮೆಯಿಡದೇ? ||

ವ|| ಈ ತಾರಾರಾಘವ ಸಂವಾದಮುಂ ಕೇಳ್ದ ವಾಲಿ ತನೂಜನಾದಂಗದಂ ನಿಜಮಾತೆಯನವಲೋಕಿಸುತ್ತಿಂತೆಂದಂ—

(ಕಂದ)

ಈತಂ ತೋರಿಹನೆನ್ನೊಳ್ |
ಮಾತುಲ ಸಂಪ್ರೀತಿಯಂ ಮುದಂಬೆಯೆ ನೀನುಂ ||
ಭ್ರಾತನಿವನೆನುವವೊಲ್ ರಘು |
ನಾಥನನಾದರಿಸು ಮರೆತು ಗತಶೋಕಗಳಂ || ೩೩

# ರಾವಣ ಸಂಹಾರ

## ಶ್ರೀಮದ್ವಾಲ್ಮೀಕಿ ರಾಮಾಯಣ

## ಯುದ್ಧಕಾಂಡ, ಸರ್ಗ ೧೧೧–೧೧೪

# ೩. ಮಂಡೋದರಿಯ ಪ್ರಶ್ನೆ

(ಕಂದ)

ದಶಮುಖವಧೆಯಾದ ಬಳಿ |
ಕ್ಕಸುರೇಶ್ವರ ಪಟ್ಟಮಹಿಷಿ ಮಂಡೋದರಿ ತಾಂ ||
ದಶರಥ ನಂದನನಂ ದೂ |
ಷಿಸಿದಳ್ ಪತಿಶೋಕದೂನಮಾನಸೆ ರುಷೆಯಿಂ || ೧

ವ|| ಅದೆಂತೆನೆ— ೨

(ಸೀಸ)

ಅಂದಿಂದ್ರ ಚಾಪಲವ ತೃಣವೆನಿಸಿದೌದಾರ್ಯ
ವಿಂದೆಂತು ದಶಶಿರನಿಗಿಲ್ಲದಾಯ್ತು |
ಸ್ಮರಕಿಣ್ವ ಸಹನೆ ಋಷ್ಯಾಶ್ರಮದೊಳಾದವೊಲು
ಲಂಕೇಶನೆಡೆಯೊಳೇಕಾಗದಾಯ್ತು |
ದೇಹಪಾತಕಿಯಮರರಾಜಭಾಗ್ಯದೊಳುಳಿಯೆ
ಮನದ ಪಾತಕಿಗೇಕೆ ಮೃತ್ಸ್ನೆಯಾಯ್ತು |
ಅನ್ಯನಪರಾಧಿಯಂ ಕ್ಷಮಿಸಿದಾ ನಿನ್ನ ನಯ
ನಿನ್ನಯುಪರಾಧಿಗೆಂತಿಲ್ಲವಾಯ್ತು ||

ಸುಗ್ರೀವನವೊಲೀ ವಿಭೀಷಣನ ರಾಜನೆನಿಸಿ |
ನಿನ್ನಮರ್ಷೋರಗಿಯುಮ್ ಇವರಿಂ ದ್ವಿಜಿಹ್ವೆಯೆನಿಸಿ |
ಮನ್ನೆ ಸೀತೆಯುನಿನ್ನು ಕರೆದೊಯ್ದು ಬಾಳು ಸೊಗದಿಂ |
ನಿನ್ನನ್ನರೆನ್ನ ಚಿಂತೆಯ ಬಗೆದು ಮರುಗಲಳವೇಂ || ೩

ವ|| ಇಂತಾ ಮಂಡೋದರಿ ಮೂದಲಿಸಿ ನುಡಿಯೆ ರಾಘ
ವೇಶ್ವರನಿಂತೆಂದಂ— ೪

(ಸೀಸ)

ಆಲಿಪುದೆಲೌ ತಂಗಿ ದೈವ ಕಾರಾಗಾರ
ನಿಗಳಯಂತ್ರಿತನಾಂ ಸ್ವತಂತ್ರನಲ್ತು |
ಪಗೆಯೆ ತಾರೆಯೊಳೆನಗೆ? ನಿನ್ನೊಳೇಂ ಕರುಬೆ? ನಾಂ
ಬಂದೆನೇಂ ನಿಮ್ಮ ವೈಧವ್ಯಕೆಂದು? |
ಆರಾರ ಮೋಹಜಾಲದ ತೊಡಕುಗಳೊಳೊ ವಿಧಿ
ಪಿಡಿದೆನ್ನ ಸೆಳೆದಾಡುತಿರ್ಪನಿಂತು |
ಪತಿಕೃತ್ಯಪಥಗತಿಯೊಳೆನಗಾಯಿತನಿವಾರ್ಯ
ವಿಂತು ನಾನಾ ಪ್ರಾಣಿ ಘಾತ ಕಾರ್ಯ ||

ಬರಿ ನಿಮಿತ್ತವೆ ನಾನು; ಮರೆತೆನ್ನ ಕಥೆಯ ನೀನು |
ಪರಿಕಿಸಾ ಭೂಸುತೆಯ ದುಸ್ಸಹದ ದುಃಖಗತಿಯ |
ನ್ಯಾಯುವವಳಿಗಮೊಂದು ಸಲ್ವುದಿಹುದಲ್ತೆ ನಮ್ಮಿಂ |
ಅಬಲೆಗಬಲೂದುಃಖದನುತಾಪ ಸಾಜಮಲ್ತೆ || ೫

ಗೌತಮುಸತಿಯುಂ ರುಮೆಯುಂ |
ಪ್ರೀತಿಯ ದನಿಗಿತ್ತ ಮಾರುದನಿಯೊಂದು ತೆರಂ ||
ಸೀತೆಯದಿನ್ನೊಂದು ತೆರಂ |
ಚೇತಃಪ್ರತಿಕಾರ್ಯಮಂತು ಫಲತೆರನಲ್ತೇ || ೬

ಚಿತ್ತ ಸ್ವಾತಂತ್ರ್ಯಂ ಜನ |
ದುತ್ತಮಧನಮದನು ಮರೆತನಾ ದಶವದನಂ ||
ಮತ್ತತೆಯಿಂದವನಾತ್ಮವ |
ನುತ್ತಾರಿಸೆ ದೈವವಿಂತು ಗೆಯ್ಸಿಹುದೆನ್ನಿಂ ||. ೭

ಅರಿತಿಹೆಯ ತಂಗಿ ನೀನ್ ಆ ನಿನ್ನ ವಲ್ಲಭನ
ಜೀವ ಸ್ವಭಾವದಾಂತರ್ಯ ವಿಧಿಯ ।
ಸಾಗರೋರ್ಮಿವೊಲವಿರತ ಕ್ಷುಭಿತ ಜೀವವದು
ನೆಲೆಗಾಣದಲೆದಾಡಿ ತೊಳಲುತಿಹುದು ।
ದಿವಿಜರನು ದಮಿಸಿಯುಂ ಭುವನಗಳ ಜಯಿಸಿಯುಂ
ನೆಮ್ಮದಿಯನರಿಯದದು ಸುಮ್ಮನಿರದು ।
ಜಾನಕೀ ವ್ಯಾಮೋಹ ವಾಸನೈಕಾವಾಸ
ಭಸ್ತ್ರಿಯಾಯ್ತಾ ದಶಗ್ರೀವ ಕಾಯಂ ॥

ಹರವರವ ಗಳಿಸಿಯುಂ ಸುರಪತಿಯ ಸೊಕ್ಕ ಮುರಿದುಂ ।
ಸ್ಮರ ಕುಟಿಲ ಪಾಶಮಂ ಪರಿಯಲಾರ್ಪಿಲ್ಲದಿರ್ದಂ ।
ಆ ವಾಸನಾಶಯವಿನಾಶದಿಂದೀಗಳಾತಂ ।
ಶುದ್ಧನಾಗಿಹನಬ್ಬೆ ಶೋಕನಿರ್ಮುಕ್ತನಾದಂ ॥ ೮

ಬಗೆದು ನೋಡೆಲೆ ತಂಗಿ; ದನುಜಪತಿ ತಾಂ ಬಾಳಿ
ಶಾಂತಿಸೌಖ್ಯವನ್ ಅನುತಿರ್ದುದೆಂತು ।
ಸೀತಾನುಚಿಂತೆಯಿಂ ಕಾದ ಹುರಿಬಾನೆಯಲಿ
ಸಿಡಿದಾಡುತಿದ್ದ ಕಾಳ್ ಅವನ ಬಾಳು ।
ಆಕೆಯ ವ್ರತದಿಂದವಂ ಬೆಂದು ಕಂದುತಿರೆ
ನೀನವಳ್ಗಾಗಿಪುದು ಕೊಲೆಯೆ ಹೊಲೆಯೆ? ।
ಈ ದ್ವೈಧವಿಷಮದಲಿ ವಿಷಘಟವಿಭಂಜನೆಯೆ
ರಾವಣಜ್ವರಕಿರ್ದ ಶಮನ ಕರಣಂ ॥

ಅತಿಶಯದ ಸೊಗದಿ ಬಾಳಲ್ಕೆ ವಿಕ್ರಮಿಸಿದಾತಂ ।
ಮೃತಿಯೊಳಲ್ಲದೆ ಬೇರೆ ನಿರ್ವೃತಿಯನೊಂದದಾದಂ ।
ಇದು ದೈವ ಜೃಂಭಿತದ ಭೀಕರ ವಿಚಿತ್ರ ಚರಿತೆ ।
ವಿಧಿವಿಕಟದನುಚಿಂತೆಯೊಳೆ ಶಮವನರಸು ತಂಗೀ ॥ ೯

(ಕಂದ)

ಸಾವಲ್ತಿದು, ಮುಕ್ತಿ; ದಶ |
ಗ್ರೀವಾಕೃತಿಪಂಜರಾಂತರದೆ ಸಾಹಸದಾ ||
ಜೀವಖಗಂ ದಿವಕಡರಿತು |
ರಾವಣನೇಂ ಸ್ವಲ್ಪ ಬಲನೆ? ನಿರುಪಮ ಸತ್ತ್ವಂ|| ೧೦

ವ|| ಆಗಳ್— ೧೧

ಇಂತೊರೆಯೆ ರಾಮನಾಕೆಯ ।
ಸಾಂತ್ವನಕೆಂದದರಿನಾಯ್ತು ಮಂಡೋದರಿಯ ||
ಸ್ವಾಂತದಿ ತತ್ತ್ವಾಲೋಕಂ
ಕಾಂತಾರದಿ ರಾತ್ರಿಯೊಳ್ ಸೊಡರ್ ಮಿನುಗಿದವೋಲ್

# ಸೀತಾವಿವಾಸನ

## ಶ್ರೀಮದ್ವಾಲ್ಮೀಕಿ ರಾಮಾಯಣ

### ಉತ್ತರಕಾಂಡ, ಸರ್ಗ ೪೩–೪೯, ೯೩–೯೭



ಶ್ರೀ ಸೀತಾದೇವಿ

(ಒಂದು ಪ್ರಾಚೀನ ಶಿಲ್ಪ)

ಪು. ೪೭]

## ೪. ಸೀತೆಯ ಪ್ರಶ್ನೆ

ವ|| ಪೌಲಸ್ತ್ಯವಧಾನಂತರದೊಳ್ ಕೋಸಲ ಸಾರ್ವಭೌಮನಾದಾ ಶ್ರೀರಾಮಂ ಕತಿಪಯಕಾಲಮವನೀ ನಂದನೆಯೊಡನೆ ಸಂಸಾರಸುಖವನನುಭವಿಸುತ್ತಿರಲದೊಂದು ದಿವಸಂ ಚಾರರಿಂ ಕೇಳ್ದ ಲೋಕಾಪವಾದದ ಕಾರಣದಿಂದಾಕೆಯಂ ಕಾಡನೈದಿಸಿ ನಾಲ್ಕಾರು ವತ್ಸರಂಗಳಾದ ಬಳಿಕ್ಕಶ್ವಮೇಧವನೊಹರ್ಕ್ಕಲೆಳಸಿ ದೀಕ್ಷಿತನಾಗಿರ್ದಂದಾ ಯಾಗಶಾಲೆಗೆ ಭಗವದ್ವಾಲ್ಮೀಕಿ ಮಹರ್ಷಿ ನಿಜಶಿಷ್ಯರಾದ ಕುಶಲವರೊಡಗೂಡಿ ಬಂದವರಿಂ ಶ್ರೀಮದ್ರಾಮಾಯಣ ಗಾನಮಂಗೈಸಿ ರಾಮಚಂದ್ರಂಗವರಂ ಸೀತಾರಾಮ ತನೂಜರೆಂದೊಪ್ಪಿಸೆ ಜಾನಕೀಮನೋಹರಂ ನಿಜಾರ್ಧಾಂಗಿಯಂ ನೆನೆದು ವಿಷಣ್ಣಮಾನಸನಾಗಿ ಚಿಂತಾಮಗ್ನನಾಗಿರ್ದು ಬಳಿಕ್ಕಾಕೆಯನಲ್ಲಿಗೈತರಿಸಿ ಸಭಾಮಧ್ಯದೊಳ್ ಪರಿಶುದ್ಧೆಯೆನಿಸಿ ಪುನಸ್ಸ್ವೀಕಾರಂ ಗೈಯ್ವುದೆಂದಾಲೋಚಿಸಿ ಮುನಿವರ್ಯನಿಂದಾಕೆಯಂ ಬರಮಾಡಿಸಿ ನೋಡಿದಾಗಳ್— ೧

(ಕಂದ)

ಕುಶಲವಜನನಿ ಪ್ರಾಚೀ |
ತಪಪಾಲಿತೆ ದೇವ ಮೌನಿ ಜನಸಂಸದದೊಳ್ ||
ವಿಶಯಾಂದೋಲಿತ ಪತಿಯಂ |
ಬೆಸಗೊಂಡಳ್ ಮಾನರೋಷವಶೆಯೀ ಪರಿಯೊಳ್|| ೨

(ದ್ವಿಪದಿ)

ಏಸುಕಷ್ಟಗಳ ನೀಂ ಪಟ್ಟೆ, ರವಿಕುಲರನ್ನ |
ಏಸನೆನಗಾಗಿ ನೀಂ ಸೈರಿಸಿದೆ, ಮನದನ್ನ || ೩

ಮೃಡನ ಧನು ನಿನಗಂದು ಮೊದಲಾಗಿಸಿದ ಘಾಸಿ |
ಕಡೆಯನ್ ಇನ್ನಾನುಮೈದದೆ ಗತವ ಕನಸೆನಿಸಿ? || ೪

ಆಹ! ನಿನ್ನಯ ಮನಸದೇಂ ಪಿರಿದೊ ಹೃದಯೇಶ |
ಆಹ! ನಿನಗಂದೆನ್ನೊಳೇಂ ತುಂಬು ವಿಶ್ವಾಸ! || ೫

ತಳೆದೆ ನೀನೆನ್ನಿಂದಲಾದ ಕಡುಭಾರಗಳ |
ಕಳೆದೆ ಬೇಡವೆನುತ್ತೆ ನಾನುಣದ ಭೋಗಗಳ || ೬

ಎಂತಪ್ಪ ಚಿಂತೆಗಳನೆಂತಹಾಪತ್ತುಗಳ |
ನೀಂ ತಾಳ್ದೆ ಎನ್ನ ಕತದಿಂದದೇಂ ಕ್ಲೇಶಗಳ! || ೭

ವನದುರ್ಗಗಳೊಳೆನ್ನ ನಡಸಿ ಪೊರೆದಾಯಸವೊ! |
ಕನಕ ಹರಿಣವನೆನಗೆ ತಂದೀಯೆ ಸಾಹಸವೊ! || ೮

ನಾಂ ಕಣ್ಗೆ ಕಾಣದಿರಲಾದಾ ಪ್ರಲಾಪಗಳೊ! |
ಶಂಕೆಗಳ್ ಮನದೊಳುದಿಸಲ್ ಕುದಿದ ಕೋಪಗಳೊ! || ೯

ಕಾನನಂಗಳೊಳೆನ್ನನರಸಿದಾ ತೊಳಲಿಕೆಯೊ! |
ವಾನರರ ಕೆಳೆಗೆಂದು ದುಡಿದಾಂತ ಬಳಲಿಕೆಯೊ! || ೧೦

ಎನ್ನ ಸುದ್ದಿಗೆ ಕಾದು ಕಂಗೆಟ್ಟ ಕಳವಳವೊ! |
ದನುಜ ಚೌರ್ಯವದೆಂದು ತಿಳಿದಾದ ತಳಮಳವೊ! || ೧೧

ವಾರಿಧಿಗೆ ಸೇತುವಂ ಕಟ್ಟಿಪ ಪರಿಶ್ರಮವೊ! |
ಧೀರ ವಾನರ ಬಲವನಾಳುವಾ ಸಂಭ್ರಮವೊ! || ೧೨

ಯುದ್ಧರಂಗದೊಳಾದ ಶರವರ್ಷಪಾತಗಳೊ ! ।
ಮುದ್ಗರ ಪ್ರಾಸ ತೋಮರ ಕುಂತ ಘಾತಗಳೊ ! ॥ ೧೩

ಇಂದ್ರಜಿನ್ಮಾಯೆಯಾ ವಿದ್ಯುತ್ಪ್ರಹಾರಗಳೊ ! ।
ಸಾಂದ್ರ ನಿದ್ರನ ಕುಂಭಕರ್ಣನಾ ಘೋರಗಳೊ ! ॥ ೧೪

ವತ್ಸ ಲಕ್ಷ್ಮಣನ ಮೂರ್ಛೆಯಿನಾದ ಭಗ್ನಗಳೊ ! ।
ಪ್ರಚ್ಛನ್ನ ರಾಕ್ಷಸರ ಭೈಷಜ್ಯ ವಿಘ್ನಗಳೊ ! ॥ ೧೫

ಶೂರ ಪ್ರತಾಪಗಳೊ ! ಭೀರು ಪ್ರಲಾಪಗಳೊ ! ।
ಕ್ರೂರದೃಶ್ಯಗಳಿನೊಗೆದಾ ಹೃದಯ ತಾಪಗಳೊ ! ॥ ೧೬

ರಾವಣನ ಭೀಷಣ ಪರಾಕ್ರಮ ವಿಜೃಂಭಣೆಯೊ ! ।
ದೇವಗಣಭೀಕರ ರಣಾಟೋಪ ಬೃಂಹಣೆಯೊ ! ॥ ೧೭

ಇನಿತೆಲ್ಲ ಕಷ್ಟಗಳ ಪಟ್ಟೆ ನೀನೆನಗಾಗಿ, ।
ಇನಕುಲೋತ್ತಮ, ನಂಬಿದಬಲೆಯೊಬ್ಬಳಿಗಾಗಿ ॥ ೧೮

ಬಳಿಕ ನೀನೆನಗೆ ಸಗ್ಗವ ಮತ್ತೆ ನಿರವಿಸಿದೆ ।
ಹಳೆಯ ಕಣ್ಣೀರ್ಗಾಲ್ವೆ ಕುರುಹ ನೀನಳಿಯಿಸಿದೆ ॥ ೧೯

ಮರಳಿ ಬರಿಸಿದೆ ನಮ್ಮ ಜವ್ವನದ ದಿವಸಗಳ ।
ಮರಳಿ ತರಿಸಿದೆ ಸೊಗದ ಸಂತಸದ ಕನಸುಗಳ ॥ ೨೦

ಚಿತ್ರಕೂಟ ವಿಹಾರ ಸಂಕಥೆಯ ನೆನಸುಗಳ ।
ಮತ್ತೆ ನೀನೆರೆದೆ ರಾಗಾಮೃತದ ವರ್ಷಗಳ ॥ ೨೧

ಪ್ರೇಮ ಸಂಜೀವನಿಯಿನೆನ್ನಸುವ ಪೋಷಿಸಿದೆ ।
ಈ ಮರುವಿನೊಳು ಮುಗುಳೆ ನಂದನವ ಬೆಳೆಯಿಸಿದೆ ॥ ೨೨

ಆ ಹಾಸ್ಯ ಲೀಲೆಗಳೊ ಆ ಪ್ರಿಯ ವಿನೋದಗಳೊ ।
ಮೋಹ ಜಲಧಿಯೊಳೆನ್ನ ನಲಚಿದಾ ಮೋದಗಳೊ ॥ ೨೩

ಆ ಮುಗ್ಧ ಚೇಷ್ಟೆಗಳೊ ! ಆ ಸರಸ ಭಾಷೆಗಳೊ |
ಏಂ ಮಾಯೆಗಳೊ ! ಎರಡು ದಿನದ ಆ ವೇಷಗಳೊ ! ೨೪

ಆದೊಡಾ ನಿನ್ನ ನಲ್ಮೆಗದೇನು ಕೊನೆಯಾಯ್ತು ? |
ಮೋದಕವ ಬಾಯ್ಗೊಗಿಸೆ ಕೆಂಡವಾದಂತಾಯ್ತು || ೨೫

ಮನೆಯ ಬೆಳಗುವೆನೆಂದು ಸೊಡರನೂದಿದುದಾಯ್ತು |
ಉಣಲಿಡುವೆನೆಂದು ಭೋಜ್ಯವ ಮಣ್ಣಿಗೆಸೆದಾಯ್ತು || ೨೬

ಮಣಿಮಕುಟ ಶಿರಕೆಂದು ಶಿಲೆಯ ಬಿಸುರಿದುದಾಯ್ತು |
ಕೆನೆವಾಲ ತುಟಿಗಿಟ್ಟು ನಂಜ ಕುಡಿಸಿದುದಾಯ್ತು || ೨೭

ಇನ್ನಾವ ಶೋಧನೆಯನೆನಗೆ ನಡಸುವೆ ದೇವ ? |
ಇನ್ನದಾವ ಪರೀಕ್ಷೆಯೋ ದುರಿತವನದಾವ? || ೨೮

ಇನ್ನುಮಿರ್ಪುದೆ ನಿನ್ನ ಮನಸಿನಲಿ ಸಂದೇಹ ? |
ಇನ್ನಾನುಮಾಗದೇ ಚೊಕ್ಕ ನಿನ್ನ ಸ್ನೇಹ ? || ೨೯

ಇನ್ನಾನುಮಾ ನಿನ್ನ ಜನ ಬಾಯ ಮುಚ್ಚುವುದೆ ? |
ಇನ್ನಾನುಮದು ನಿನ್ನ ನೇಮಗಳ ಮೆಚ್ಚುವುದೆ ? || ೩೦

ಇನ್ನಿಳಿವುದೇನವರ ಮೆಚ್ಚಿಸುವ ನಿನ್ನ ಚಟ ? |
ಇನ್ನಾನುಮಾದೀತೆ ನಿಜವಿವೇಕ ಪ್ರಕಟ ? || ೩೧

ಏಕೆನ್ನನಂತು ನೀಂ ಬನಕೆ ದೂಡಿದೆ, ದೊರೆಯೆ ? |
ಪ್ರಾಕೃತ ಕ್ಷುದ್ರತೆಗೆ ರಾಜನದಿರಿಕೆ ಸರಿಯೆ ? || ೩೨

ಪಾಮರಾಕ್ರೋಶನವೆ ರಾಜವಿಧಿಗಾಧಾರ ? |
ಭೂಮಿಪರ್ಗಿರದೇಂ ಸ್ವತಂತ್ರ ಮಂತ್ರ ವಿಚಾರ ? || ೩೩

ಗೌತಮ ಕುಟುಂಬದೊಳು ನೀಂ ತೋರಿದೌದಾರ್ಯ |
ಸೀತೆಯ ಹತಾದೃಷ್ಟಕಿಂತಾಯಿತೆ ಕದರ್ಯ ? || ೩೪

ಇನ್ನೀಗಳಿನ್ನ ನೀಂ ಕರೆದೊಡೇಂ, ಮರೆತೊಡೇಂ? |
ಎನ್ನ ಕಷ್ಟಕಮೊಂದು ದಿವಸ ಕಡೆಯಾಗದೇಂ? || ೩೫
ಹಾ ನಾಥ, ಬಾಳು ನೀಂ; ಸೊಗದಿ ರಾಘವ ಬಾಳು |
ನಾನೇಕೆ ನಿನಗಿನ್ನು? ಸೊಗದಿ ರಾಜ್ಯವನಾಳು || ೩೬

ವ|| ಇಂತಾ ಪೊಡವಿಯಮಣುಗಿಯುಳಲ್ದೊರಲುತ್ತಿರೆ ದಿನಪಕುಲ
ತಿಲಕನಿಂತೆಂದಂ— ೩೭

ಕೇಳೌ ಹೃದಯೇಶ್ವರಿ ನೀ |
ನಾಲಿಪುದಾನೊರೆವ ಧರ್ಮಸೂಕ್ಷ್ಮವ ದಯಿತೇ ||
ತಾಳಳಲನ್, ಎದೆಯ ಸಂತವಿ |
ಡಾಲೋಚಿಸು ತತ್ತ್ವಗತಿಯ ಶಾಂತದ ಮನದಿಂ || ೩೮

ಜಾನಕಿ ನೀಂ ಸುಖದುಃಖ ಸ |
ಮಾನಸ್ವೀಕಾರೆಯೆಂದು ನಾನೆಣಿಸಿರ್ದೆನ್ ||
ಮಾನವ ಸಾಮಾನ್ಯರ ವೊಲೆ |
ನೀನುಂ ವೈಷಯಿಕ ಮೋಹ ಮೋಕಾವೃತಳೇಂ || ೩೯

ಧರಣಿಜೆ ಧರ್ಮದ ತುಲಿಯೊಳ್ |
ಪುರುಷಂ ನಿಜಭೋಗ ಲೋಕಸಂಸ್ಥಿತಿಯೆಂಬೀ ||
ಎರಡು ಫಲಂಗಳ ತೂಗಿಸಿ |
ಗುರುತರವಂ ಗ್ರಹಿಪುದಲ್ತೆ ಸುಕೃತ ವಿವೇಕಂ || ೪೦

ದೊರೆಯ ಕುಟುಂಬಂ ಪ್ರಜೆ ಪಾ |
ಮರರೋ ಪಂಡಿತರೊ ಆರೊ ಪರಿಪಾಲ್ಯರವರ್ ||
ಗುರುವೊಲು ಗೃಹಪತಿವೊಲವಂ |
ಪರಿರಕ್ಷಿಪುದವರ ಧರ್ಮಸಮಯಾದರವಂ || ೪೧

ಜನದೊಳ್ ದಂಪತಿಜೀವನ |
ದನುರಾಗವ ಶಂಕೆ ಸೋಕದಂತೆಸಗಲ್ ಮೇ ||
ದಿನಿಪಾಲ ಪಾಲಿಯರ್ ತಾಂ |
ಮನೆಬದುಕಂ ಬಲಿಯ ಕುಡುವುದೆನೆ ತಪ್ಪುವರೇ? || ೪೨

ಅನ್ಯಾಯವ ನಿನಗೆಸಗದೆ |
ನಾಣ್ನುಡಿಗಾಂ ಕಿವಿಯ ಕುಡದೆ ನಡೆದಿರಲಾಗಳ್ ||
ಮುನ್ನಿನ ಧರ್ಮಾಚರಣೆಗೆ |
ಮನ್ನಣೆಯಂ ನೀಡುತಿರ್ಕುಮೇಂ ಜಾನಪದಂ || ೪೩

ತ್ಯಾಗಕೆ ನಾಂ ಮನಮಿಲ್ಲದೆ |
ಲೋಗರ ಮಾತೇನದೆಂದುಪೇಕ್ಷಿಸಿ ಬಾಳ್ದಂ ||
ಬೇಗುದಿಯುದುಸಿರುತಿರ್ದವೆ |
ಬಾಗಿಸದೇಂ ಚಿಂತೆ ನಮ್ಮ ಶಿರಗಳನೆಂದುಂ || ೪೪

ಸಲುವುದಬಲರಿಗೆ ಮರುಕಂ |
ಬಲವಂತರ್ಗುಚಿತಮಾತ್ಮ ನಿಗ್ರಹ ನಿಯಮಂ ||
ಎಳೆಗೂಸನೆತ್ತಿಕೊಳುವಳು |
ಬೆಳೆದವನಂ ತಾಯಿ ನಡೆಯ ಪೇಳಳೆ ನಲವಿಂ? || ೪೫

ಊರ್ಮಿಳೆಯೇಂ ಲಕ್ಷ್ಮಣನೊಳು |
ಕೂರ್ಮೆಯ ನಿಡದವಳೆ? ಬಗೆದು ನೈಜಸ್ಥಿತಿಯಂ ||
ಧರ್ಮವನೆಱಿತದರರ್ಚೆಗೆ |
ನಿರ್ಮಲ ಜೀವಿತವನಿತ್ತಳವಳೆ ಸುತೃಪ್ತಳ್ || ೪೬

*

ನಿನಗದಕಿಂತಾದುದದೇಂ? |
ವನವಾಸಕ್ಲೇಶ ನಿನಗೆ ಪೊಸತೆರದೆಡರೇಂ? ||
ಎಣಿಸೆಯ ನಿನ್ನಂತೆಯೆ ನಾ |
ನನುಭವಿಸಿಹೆನೆಂದು ನಿನ್ನ ವಿವಸಿಸಿದಳಲಂ || ೪೭

(ಮತ್ತೇಭ)

ಚಿರದಿಂ ರಾಜ್ಯವ ಕಾಯ್ದು ಜಾನಪದದಂ
ಗೀಕಾರದಿಂ ನಿಂದು ಸು |
ಸ್ಥಿರಮಾರ್ಗಂಗಳೊಳಿಲ್ಲರಂ ನಡೆಯಿಸು
ತ್ತಿರ್ಪ್ಪಾರ್ಥರ್ಮಂಗಳೊಳ್ ||
ಧರಣೀ ಸಂಭವೆ ನಿನ್ನ ನನ್ನ ಕಥೆಯಿಂ
ಲೋಗರ್ಗೆ ಸಂದೇಹಮಂ |
ಕುರಿಸಲ್ಕಾಗದವೋಲುನಾಮಿರುವುದೆಂ
ದಾಂ ಗೈದೆನಾ ಕ್ರೂರಮಂ || ೪೮

(ಸ್ರಗ್ಧರಾ)

ಮಾತೆ ಕ್ಷ್ಮಾದೇವಿ ಸರ್ವಂಸಹೆ ಶಮಮಯೆ
ಸಾಕ್ಷಾತ್ ಕ್ಷಮಾಮೂರ್ತಿ ನಿನ್ನಾ |
ತಾತಂ ರಾಜರ್ಷಿಮುಖ್ಯಂ ಜನಕನರವರಂ
ಬ್ರಹ್ಮಯೋಗ ಪ್ರತಿಷ್ಠಂ ||
ಸೀತೇ ನೀಂ ತ್ಯಕ್ತಸರ್ವಸ್ಪೃಹೆಯುವರವೊಲೇ
ಲೌಕಿಕದ್ವಂದ್ವಭೋಗಾ |
ತೀತಾಂತರ್ಭಾವೆಯೆಂದಾನೆಣಿಸಿದೆನದು
ತಾನಾಯಿತೆನ್ನ ಪ್ರಮಾದಂ || ೪೯

ವ|| ಇಂತು ರಘುನಂದನನುದೀರಿಸಿದಂತರ್ಭಾವನಿರೂಪಣೆಯಂ ಜನಕನಂದಿನಿಯಾಲ್ಕೈಸುತ್ತಿರಲತ್ತಲುರ್ವೀತಳದೊಳದೊಂದೆಡೆ ಘನಗರ್ಜಿತಮೇಳ್ದು ಧರೆ ಬಿರಿದು ಸೀಳೊಡೆಯಲಾ ಮಹಾದ್ಭುತ ವಿವರದಿಂದದೊಂದು ವಾಕ್ಯಂ ಪ್ರಸ್ಫುಟಮಾದುದದೆಂತೆನೆ— ೫೦

(ಸೀಸ)

ಜಯ ಜಯ ನೀಂ ಧನ್ಯ ರಾಮಭದ್ರನೆ ಪೂರ್ಣ
ವಾಯ್ತು ನಿನ್ನವತಾರ ಕಾರ್ಯಮಿಂದು |
ನಿರ್ಲೋಭಧರ್ಮ ನೀಂ ಸತ್ಯದಿಂ ಪಿತೃವಾಕ್ಯ
ಜಾರದಿರಲೆಂದರಸುತನವ ತೊರೆದೆ |
ಶೂರಾಗ್ರಣಿಯೆ ಲೋಕ ಸಂಕ್ಷೋಭಕರ ಹರಿಸಿ
ಸಂಸ್ಥಿತಿಯ ಹಿತವನೆಲ್ಲರ್ಗಮಿತ್ತೆ |
ಕಾರುಣ್ಯಘನಮೂರ್ತಿ ಪತಿತರನು ಸಂತೈಸಿ
ಪಾವಿತದೆ ನೂತ್ನ ಜೀವಿತರ ಗೆಯ್ದೆ ||
ವಿಶ್ವವಿಭು ಪರಬೊಮ್ಮನೆಂದು ನೀಂ ಬಗೆದು ಮನದಿ |
ಪ್ರಭುವಾದೊಡಂ ಭೃತ್ಯನಂತೆ ಪರಿಚರಿಸಿ ಧರೆಯಂ |
ಸಂಸಾರ ಭರಣದೊಳೆ ಸಂನ್ಯಸನ ನಯವ ತೋರ್ದೆ |
ಮಾಯೆಯಂ ಪರಿದಂಗೆ ಜಾಯೆಯೋ ನಾರದೇನು || ೫೧

(ಮತ್ತೇಭ)

ಅರಸಾನಲ್ತೆನದೊಂದುಮಲ್ತು ವಿಭುವಿರ್ಪಂ
ಬೇರೆ ಶುದ್ಧಾಂತದೊಳ್ ।
ಪರಿಚರ್ಯಾರ್ಜಿತಮಲ್ಲದೊಂದನುಮಣಂ
ನಾಂ ಭುಂಜಿಸೆಂ ರಾಜಕಿಂ ॥
ಕರನಾಗಿರ್ದು ಹಸಾದದಿಂ ತಣಿವೆನೆಂಬಾ
ದೀಕ್ಷೆಯೊಳ್ ಬಾಳ್ದವರ್ ।
ಸಿರಿರಾಮಂ ಪ್ರಿಯಲಕ್ಷ್ಮಣಂ ಭರತವತ್ಸಂ
ವಾಯುಪುತ್ರಂ ದೃಢಂ ॥ ೫೨

(ಕಂದ)

ಶ್ರೀರಾಮನೆ ಲಕ್ಷ್ಮಣನೇ ।
ವೈರಾಗ್ಯದಿ ಭರತನೇ ಮರುನ್ನಂದನನೇ ॥
ಆರಿವರೊಳಗ್ರ್ಯರೆನ್ನುತ ।
ಲಾರಯ್ವುದು ಲೋಕವೆಲ್ಲಕಾಲದಿ ನಿಮ್ಮಂ ॥ ೫೩

ಜಯ ಸೀತಾ ಜೀವೇಶ್ವರ ।
ಜಯ ರಘುಕುಲವೀರ ಲೋಕಧರ್ಮಾಧಾರಾ ॥
ದಯಿತೆಯ ನೀಂ ಬೀಳ್ಕೊಡಲಿದು ।
ನಿಯತ ಕ್ಷಣಮಿದುವೆ ಮಂಗಳಂ ಸ್ವಸ್ತಿ ಶುಭಂ ॥ ೫೪

## ೫. ಲೋಕಜನದ ಪ್ರಶ್ನೆ

ವ|| ಕೋಸಲೇಶ್ವರನಾದ ಶ್ರೀರಾಮಚಂದ್ರನಶ್ವಮೇಧ ಪರಿ
ಸಮಾಪ್ತ್ಯನಂತರದೊಳ್ ಭಗವದ್ವಾಲ್ಮೀಕಿ ಮಹರ್ಷಿಯಾಶ್ರ
ಮದಿಂ ವೈದೇಹೀರಹಿತನುಂ ಕುಶಲವಸಹಿತನುಮಾಗಿ ನಿಜ
ರಾಜಧಾನಿಯಾದಯೋಧ್ಯೆಗೈತಂದ ದಿನದೊಳಾವಾರ್ತೆ ಪುರ
ಜನದೊಳ್ ಪ್ರಚಾರಂಗೊಳ್ಳೆ— ೧

(ಕಂದ)

ವಿನಮಿತಶೀರ್ಷರ್ ವಿಸ್ಮಿತ|
ರನುತಾಪಗ್ರಸ್ತಚಿತ್ತರಾದರಯೋಧ್ಯಾ||
ಜನಪದದೆಲ್ಲರುಮಂದಾ|
ಜನಕಜೆಯ ರಸಾತಲಪ್ರವೇಶದ ಕಥೆಯಿಂ|| ೨

ವ|| ಅಂತು ಸಮುದ್ವೇಜಿತ ಮನಸ್ಕರಾದಾ ಪೌರರಾಪುರದ
ನಾನಾವೀಧಿಗಳೊಳಮುಪವನಂಗಳೊಳಮಲ್ಲಲ್ಲಿ ಗುಣ್ಪುನೆರೆದು
ಪರಸ್ಪರ ಪ್ರಶ್ನೋತ್ತರಂಗಳಿಂದಂತರಂಗದ ಭಾವೋದ್ರೇಕ
ಭಾರಮನಿಳಿಸಿಕೊಳತೊಡಗಿರಲಾ ವಾದವಿವಾದಾವಸರದೊ
ಳದೊರ್ವನಿತೆಂದಂ— ೩

(ಕಂದ)

ಪೋದುದೆ ನಾಡಿನ ಸಿರಿ ನಮ |
ಗಾದುದೆ ಅನ್ಯಾಯಕಾರಿಗಳ ದುರ್ಣಾಮಂ ||
ವೈಧುರ್ಯಂ ದೊರೆಗೊದವಿತೆ |
ವೈದೇಹಿಯುದೇಂ ಕಠೋರ ಕಾರ್ಯವ ಗೈದಳ್ || ೪

ವ|| ಇನ್ನೊರ್ವನಿಂತೆಂದಂ— ೫

ಧರಣಿ ಯಿಂದೇನವಮತಿಯುಂ |
ಪುರುಷಕುಲಕ್ಕಾಗಿಸಿರ್ಪಳಕ್ಕಟ! ದೊರೆಯುಂ ||
ಪರಿಭವಕೀಡಾದಂ ಜನ |
ಪರಿವಾದವನಚ್ಚಿ ನಡೆದುದೇಂ ವಿಪರೀತಂ! || ೬

ವ|| ಇನ್ನೊರ್ವನಿಂತೆಂದಂ— ೭

ಆರರುಹಿದನೋ ದೊರೆಗಾ |
ದೂರಿನ ಪುಸಿವಾತನವನದೇಂ ಮತಿಹೀನಂ ||
ಊರಿನ ಕೇರಿಯ ಸಂತೆಯ |
ವೋರೆಯ ಚೇಷ್ಟೆಯನದಾರು ದೊರೆಗುಸಿರಿದವಂ|| ೮

ವ|| ಮತ್ತೊರ್ವನಿಂತೆಂದಂ— ೯

ಒರೆದನದಾರ್ ಅಶ್ಲೀಲವ |
ನರಪತಿಸಂಮುಖದಿ ಲೋಕವಾರ್ತೆಯದೆನುತುಂ ||
ಸರಿಯೇಂ ಯುಕ್ತಾಯುಕ್ತವ |
ಪರಿಕಿಸದನ ದೌತ್ಯವವನಿನಾಯ್ತೇ ವಿಷಮಂ || ೧೦

ವ|| ಮತ್ತಮೊರ್ವನಿಂತೆಂದಂ— ೧೧

(ಕಂದ)

ಅರಿಯೆಯ ನೀನಾರಾ ದು |
ರ್ಭರ ಲೋಕಶ್ರುತಿಯನರಿಪಿದಂ ನೃಪನಿದಿರೊಳ್ ||
ನರಪತಿಯ ಗೂಢಚರರೊಳ್ |
ಧುರಂಧರಂ ಭದ್ರನವನೆ ಮೌಢ್ಯಸಮುದ್ರಂ || ೧೩

ವ|| ಆ ಪೆಸರಂ ಕೇಳ್ದ ಜನಸಂದಣಿಯೆಲ್ಲಮುಂ ಕೋಪೋದ್ದೀಪಿತಮಾಗಿ ಭದ್ರನೆನಿಸಿದಾ ರಾಜಕಿಂಕರನನೆತ್ತೆತ್ತಲುಮರಸಿ ಕಡೆಯೊಳವನಂ ಪಿಡಿದು ಸುತ್ತಮುತ್ತಿ ಪೃಚ್ಛಾಪೃಚ್ಛೆಯಿಂ ತರ್ಜಿಸುತ್ತಂ ಗರ್ಜಿಸುತ್ತಮಿರ್ಪಾಗಳದೊರ್ವನಿಂತೆಂದಂ—

ಭದ್ರನೆ ನೀನಪಭದ್ರಂ |
ಛಿದ್ರವನೆಸಗಿದೆಯಲಾ ದುರಾತುರದಿಂದಂ ||
ಏಂ ದ್ರೋಹವಾಯ್ತೊ ರಾಜ್ಯೋ |
ಪದ್ರವವಿದನಂದೆ ತಿಳಿಯದಿರ್ದೆಯ ಮರುಳೇ || ೧೪

ವ|| ಇಂತಾ ಜನಸಂಮರ್ದದ ಗರ್ಹಣದಿಂ ಪ್ರಧರ್ಷಿತನಾದಾ ಭದ್ರಹತಕಂ ಪ್ರತ್ಯುತ್ತರ ವಿಧಾನದೊಳಿಂತೆಂದಂ— ೧೫

ನಾನೇಂ ಗೈದೆಂ ದೊರೆಯಿ |
ತ್ತಾಣತಿಯಂ ಗೈದೆನಲ್ಲದಿನ್ನೊಂದಿಲ್ಲಂ ||
ಜಾನಪದ ವಾರ್ತೆಗಳ ನ |
ನ್ಯೂನದೆ ನೀಂ ಪೇಳ್ವುದೆಂದು ವಿಧಿಸಿದನಾತಂ|| ೧೬

ಸತ್ಯವ ಪೂರ್ಣದಿನೊರೆವುದೆ।
ಭೃತ್ಯಂಗಿಹ ಧರ್ಮವವನ ಕಥಿತಾಂಶಗಳಿಂ॥
ಕೃತ್ಯಾಕೃತ್ಯವ ಪರಿಕಿಸು।
ತಿತ್ಯರ್ಥವ ಗೈವ ಪದವಿ ರಾಜನದಲ್ತೇ॥ ೧೭

ಕೆಟ್ಟಜನ ನೀವೆ, ಲೋಗರೆ।
ನೆಟ್ಟರಿ ನೀವಂದು ದುಷ್ಪ್ರವಾದದ ಬಿತ್ತಂ॥
ಬಿಟ್ಟಿಹುದದು ವಿಷಫಲವಂ।
ಕೆಟ್ಟರಲ್ತೆ ಬಾಯತಿಮಿರದುರುಬಿಂದಲೆ ನೀಂ॥ ೧೮

ನಾನೇಂ ಬಲ್ಲೆಂ? ಭವಿತ್ಯ।
ಜ್ಞಾನಮದೆಂತಪ್ಪುದೆನಗೆ? ನಾನರಿಯುದವಂ॥
ಯಾನವನಾಗಿಸಿತೆನ್ನಂ।
ಹೀನೋದಂತಕ್ಕೆ ವಿಧಿಯದೇಂ ವಂಚನೆಯೋ॥ ೧೯

ವ॥ ಇಂತಾ ಭದ್ರನೆನುವುದುಂ ಜನಪ್ರಮುಖರವನ ಯುಕ್ತಿಗಿದಿರ್ನುಡಿ ನುಡಿಯಲರಿಯದೆ ರಾಜ್ಯಸ್ವಾಮಿಯಾದ ರಘುಪತಿಯ ಸನ್ನಿಧಾನದೊಳೆ ಮೊರೆಯಿಡಲ್ವೇಳ್ಕುಮೆಂದು ನಿಶ್ಚಯಂಗೈದರಮನೆಗೈತಂದು ರಾಮಚಂದ್ರಪ್ರಭುವಂಕಂಡು ಪ್ರಣಾಮಂಗಳನೆಸಗಿ ಬಿನ್ನಪಂಗೈದರದೆಂತೆನೆ— ೨೦

ಪ್ರಭುವೇ ತಂದೆಯವೊಲು ನೀ।
ನಭಯವ ತೋರ್ಪುದು ಮಹಾಪರಾಧಿಗಳೆಮ್ಮೊಳ್॥
ಶುಭವರಿಯದ ಬಾಲಿಶರವೊ।
ಲಭಿಶಂಸನಕಿತ್ತೆವೊಮ್ಮೆ ಮನವನದೆಂತೋ॥ ೨೧

ಅಪವದಿಸಿದೆವೈ ನಮ್ಮಯ |
ನೃಪದೇವನನಂತೆ ರಾಜ್ಯಲಕ್ಷ್ಮಿಯನಂಥರ್ ||
ಕೃಪಣರ್ ನಾಂ ತಾಯ್ತಂದೆಯ |
ರಪನಿಂದೆಯಿನಿಂದು ಪಾಪಹತರಾಗಿಹೆವೈ || ೨೨

ತಮದೊಳ್ ಬಿದ್ದೆವು ಮತಿ ವಿ |
ಭ್ರಮೆಯಿಂದಂ ದುಡುಕಿನಿಂದಂ ಅವಿಮೃಶೆಯಿಂ ನಾಂ
ಕ್ಷಮಿಪುದು ನಮ್ಮಂ ರಘುವರ |
ಮಮತೆಯನೀಂ ತಳೆದು ತಾಯವೊಲ್ ಪಸುಳೆಗಳೊಳ್

ಕರೆಯಿಸು ರಾಣಿಯ ವಿಭು ನೀಂ |
ಧರಣೀಮಾತೆಯನು ನಚ್ಚಿ ಸುತ್ತನುನಯದಿಂ ||
ಎರಗುವೆವು ನಿಮ್ಮ ಪದದೊಳು |
ಮರೆಯೆವದಿನ್ನೆಂದುಮೊಡೆಯ ನಡೆದದ್ಭುತಮಂ || ೨೪

ವ|| ಇಂತು ಪ್ರಜಾಪ್ರಮುಖರಾಡಿದ ನುಡಿಯಂ ಕೇಳಿ ಶ್ರೀ
ರಾಮಪ್ರಭುವಿಂತೆಂದಂ— ೨೫

ವಿನಯುವ ನುಡಿದಿರಿ ಮಿತ್ರರೆ |
ಕನಿಕರವಂ ನುಡಿದಿರೆನಗದೈ ಹೃದಯಹಿತಂ ||
ಅನುಚಿತವಂ ನಿಮ್ಮೊಳು ನಾ |
ನಣಮುಂ ಕಾಣೆಂ ಕಳಂಕವೆನ್ನದು ಸಖರೇ || ೨೬



ಆರರಿವರ್, ಎಂದು ಕರ್ಮದ |
ಭೂರುಹಮೇಳ್ದಾವಫಲವ ತಾಂ ನೀಡುಗುಮೋ ||
ಕ್ರೂರಿಯೊ ಸಾನವಿಚಾರಿಯೊ |
ಸಾರಿಯರಿಂಗಾವ ದುಃಖವೆನ್ನಿಂದಾಯ್ತೋ || ೨೭

ರುಮೆಯುಪವಾದವನಾಲಿಸಿ |
ಸಮುಲಿಸವಂ ಗೈದೆನೆನ್ನ ರಸನೆಯುನಂದಾಂ ||
ರುಮೆಯಾ ಶಾಪವೊ ಎನುವವೊ |
ಲಮರಿತು ತತ್ಸದೃಶಶೂಲವೆನ್ನಯ ಕಿವಿಗಂ || ೨೮

ವ|| ಇಂತು ರಘುರಾಮನನುಶೋಕಿಸಲೊರ್ವಪೌರಪ್ರಷ್ಠನಿಂತೆಂದಂ— ೨೯

ಕಲಿತೆವು ತತ್ತ್ವವ ದೊರೆಯೇ |
ತಿಳಿದೆವು ಲೋಕಪ್ರವಾದದಂಧಕಗತಿಯಂ ||
ಒಲಿದೆಮ್ಮೊಳಿನ್ನು ಸಿರಿ ಮಂ |
ಗಲರೂಪಿಯು ತಾಯು ತರಿಸಿ ಹರಸೆಯ ತಂದೇ || ೩೦

ವ|| ಈ ವಾಕ್ಯವಂ ಕೇಳ್ದು ರಾಘವಂ ಖೇದಪ್ರಸಾದಸಂಮಿಶ್ರಿತಮೃದುಮಂಜುಹಾಸಮಂ ಬೀರುತಿಂತೆಂದಂ— ೩೧

ಏಸೇಸು ಕಾಲವಾರಾರ್ |
ಕ್ಲೇಶಂಗಳದೇನನೇನನನುಭವಿಸಿದರೋ ||
ದೋಷಾರೋಪೋಕ್ತಿ ವಿಷ |
ಯಾಸದ ದುಷ್ಫಲವನಿಂತು ಕಾಣಲ್ ಮನದೊಳ್ ||

ಜನಪೈಶುನ್ಯದ ಹಸಿತಂ |
ವನವಹ್ನಿವೊಲಾಗಿ ಹರಡಿ ನಿರ್ದೋಷಿಗಳಂ ||
ಗಣಿಸದೆ ದಹಿಪುದು ಸಕಲರನ್ |
ಅನುಕಂಪೆಯನುಳಿದ ವಚನಮುರಗೀರದನಂ || ೩೨

ಅಮಲವಿರಲಂತರಂಗಂ |
ಸಮನಿಸಿರಲ್ ಮಾನವಸ್ವಭಾವಾನುಭವಂ ||
ವಿಮೃಶೆಯನೆಸಗಲ್ ನ್ಯಾಯ್ಯದಿ |
ಕ್ಷಮೆಯುದಯಿಪುದದುವೆ ಸಕಲ ಧರ್ಮಕೆ ಮೂಲಂ||

ವ|| ರಾಘವ ನಿಂತೆನುವುದುಂ ಪುರವೃದ್ಧನೊರ್ವನಿಂತು ಪಂಬಲಿಸಿದಂ— ೩೫

ಏಂ ದೊರೆಯೆ, ಕ್ಷಮೆಯೆನಿಪ ವ |
ಸುಂಧರೆ ತಾಂ ಕ್ಷಮಿಸಳೇನಯೋಧ್ಯೆಯ ಜನಮಂ ||
ಇಂದಿರೆಯವೊಲೀ ಪ್ರಜೆಗಾ |
ನಂದನಳಹ ಜನಕಸುತೆಯ ನೀಂ ಕರೆಯಿಸೆಯೇಂ||

ವ|| ಇದನಾಲಿಸಿ ಜಾನಕೀವಿಯೋಗವ್ಯಥಿತನಾದಾ ಮಹಾನುಭಾವನಿಂತೆಂದಂ— ೩೭

ಕೃತಕೃತ್ಯೆಯಾದಳಾ ಕ್ಷಿತಿ |
ಸುತೆಯಾಕೆಗೆ ಕಾರ್ಯಮಿನ್ನದೇನೀ ಭುವಿಯೊಳ್ ||
ಗತಬಲನಾದೆಂ ನಾನುಂ |
ಮಿತಮಲ್ತೇನೆನ್ನ ಜೀವಚರಿತೆಯುಮಿಳೆಯೊಳ್|| ೩೮

ಕುಶಲವರಿನ್ನೀ ರಾಜ್ಯವ |
ಋಷಿ ವಾಲ್ಮೀಕಿ ಪ್ರಶಿಕ್ಷಿತರ್ ಧರ್ಮವಿದರ್ ||
ಕುಶಲರ್ ವೀರರ್ ನಡೆಯಿಕೆ |
ವಸುಧೆಯೆ ದೌಹಿತ್ರರಂ ಚಿರಂ ಕಾಪಿಡುವಳ್|| ೩೯

(ಮತ್ತೇಭ)

ಪ್ರಜೆಯಿಂ ರಾಜ್ಯಮವರ್ ವಿಸತ್ತ್ವರಿರೆ ರಾ
ಜಾಮಾತ್ಯಕೋಶಂಗಳಿಂ |
ಸೃಜಿಸಿರ್ಪರ್ ಜನತಾತ್ಮಸಂಸ್ಕರಣಕೆಂ
ದಾರ್ಷೇಯರೀ ಸಂಸ್ಥೆಯಂ ||
ಋಜುಶೀಲಂ ಸಹಭಾಗಿಭಾವಮುಮಲ
ಜ್ಞಾನಾಸ್ಥೆ ಲೋಕಾದರಂ |
ನಿಜಧರ್ಮೋದ್ಯಮಮೀ ಗುಣಂಗಳಿನವ
ರ್ಗ್ಗಿಷ್ಟಾಭ್ಯುದಯಮುಂ ಶ್ರೇಯಮುಂ || ೪೦

ವ|| ಈ ಮಂಗಳಾಶಾಸನಮಂ ಕೇಳ್ದ ಜನವೃಂದಮಿಂತೆಂದುದು— ೪೧

ಇನ್ನೇನನರಸ ಬಲ್ಲೆವು |
ಬಿನ್ನಹವೆಮದಿನಿತೆ—ನಿನ್ನವೊಲ್ ಬಾಳ್ಗೆ ಸುತರ್ ||
ಸನ್ನಯ ವಿವೇಕ ಕರುಣೆಗ |
ಳುನ್ನತಿಯಂ ಪಡೆಗೆ ರಾಜ್ಯಜನವರ್ಗಗಳೊಳ್ || ೪೨



ಯೋಗಿ ಹನುಮಂತ

(ಒಂದು ಪ್ರಾಚೀನ ಶಿಲ್ಪ)

ಪು. ೫೫]

## ೬. ಹನುಮಂತನ ಪ್ರಶ್ನೆ

(ಕಂದ)

ಶ್ರೀರಾಮಂ ಸಾಮ್ರಾಜ್ಯದ |
ಭಾರವ ಕುಶಲವರೊಳಿಟ್ಟು ವಿಶ್ರಾಂತಿಯೊಳಾ ||
ತ್ಮಾರಾಮನಿರ್ದ ಕಾಲದಿ|
ಮಾರುತಿ ಬೇಡಿದನದೊರ್ಕೆ ವರವನದೊಂದಂ || ೧

ವ|| ಅದೆಂತೆನೆ— ೨

ಪುರುಷ ಕುಲಾದರ್ಶನೆ ನೀ |
ನೊರೆಯೆಯ ಜೀವ ಪ್ರಪಂಚದೊಳತತ್ತ್ವವದೇಂ ||
ತೆರಳುವೆ ನಾನಿನ್ನಟವಿಗೆ |
ಪರದೈವಧ್ಯಾನದಿಂದೆ ಶಾಂತಿಯ ಗಳಿಸಲ್ || ೩

ಧರ್ಮ ಸ್ವರೂಪವೇಂ ಪ್ರಭು|
ಕರ್ಮದ ಬಲೆಯಿಂದದೆಂತು ಜೀವಿಗೆ ಮೋಕ್ಷಂ ||
ಮರ್ಮವದೇನೀ ಜಗದೊಳು |
ನಿರ್ಮಲತತ್ತ್ವವನದೆಂತು ಕಾಣ್ಬುದು ಗುರುವೇ || ೪

ತಮವೇಂ ಸತ್ತ್ವವದೇಂ ಪ್ರಭು |
ವಿಮರ್ಶೆಗಳವಡದು ದೇವ ನಿನ್ನಯ ಚರಿತಂ
ಕ್ಷಮಿಸಿದೆ ಪಲರಂ ದುರಿತದಿ |
ಯಮದಂಡವನಿಟ್ಟೆ ಪಲರಿಗದರರ್ಥವದೇಂ || ೫

ಜನರೂಢಿಯೆ ಪರಧರ್ಮವೆ |
ಮುನಿಸಮ್ಮತ ಶಾಸ್ತ್ರವೇಂ ಪ್ರಮಾಣಂ ನಡೆಯೊಳ್ ||
ಮನುಜನ ನೈಜಮತಿಕ್ರಿಯೆ |
ಯನರ್ಥಕಾರಿಯೆ ವಿವೇಕಮೇಂ ನಿಷ್ಫಲಮೇ || ೬

ವ|| ಇಂತಾ ವಾಯುತನೂಜಂ ಪ್ರಶ್ನಿಸೆ ಪ್ರಸನ್ನ ಗಂಭೀರ
ನಾದಾ ರಾಮಚಂದ್ರ ಯೋಗೀಶ್ವರ ನಿಂತೆಂದಂ— ೭

ಪ್ರಾಣಸಮ, ಕೇಳು ಪೇಳ್ವೆಂ |
ನಾನರಿತುದನಾ ವಸಿಷ್ಠಗುರು ಬೋಧನೆಯಿಂ ||
ಜ್ಞಾನವದತೀಂದ್ರಿಯಾರ್ಥಂ |
ಧ್ಯಾನಾಭ್ಯಾಸಂಗಳಿಂದದನುಭವಸಾಧ್ಯಂ || ೮

ಆಲ್ಯೈಸು ಸಖನೆ ಧರ್ಮದ |
ಮೂಲಂಗಳ್ ಗೂಢಮಿಹುವು ಸೃಷ್ಟಿಕ್ರಮದೊಳ್ ||
ಈ ಲೋಕಸೃಷ್ಟಿ ದೇವನ |
ಲೀಲಾಂಶಂ ಧರ್ಮವವನನೈದಿಪ ಪಯಣಂ || ೯

ವಿಶ್ವಾಶ್ವತ್ಥಂ ಮಾರುತಿ |
ನಶ್ವರ ವಿಟಪಗಳ ಪೊತ್ತ ಶಾಶ್ವತ ವೃಕ್ಷಂ ||
ಭಾಸ್ವದನಂತ ಶರೀರಗ |
ಳೀಶ್ವರ ಮಾಯಾ ವಿಲಾಸ ವೇಷಾಕೃತಿಗಳ್ || ೧೦

ಕೃಶಮಾಗಲೊಂದು ವಿಟಪಂ |
ಕಿಸಲಯಮಿನ್ನೊಂದರಗ್ರದೊಳ್ ಜನಿಸಿರ್ಕುಂ ||
ರಸಮೊದವುಗುಮದಕೀಶ್ವರ |
ವಶದಿಂದಪರಿಮಿತ ಶುದ್ಧಸತ್ತ್ವಾಕರದಿಂ || ೧೧

ಆ ಒವ್ಯ ನಿತ್ಯಲೀಲಾ |
ಪಾದಪದಭಿವೃದ್ಧಿಯುಹುದು ಜೀವಾಶಯುದಾ ||
ಖೇದಭಯಾ ಮೋದೇಚ್ಛೆಯು |
ಚೋದನೆಗಳಿನಲ್ಲಿ ಪುಣ್ಯ ಪಾಪದ ಬೇರ್ಗಳ್ || ೧೨

ತ್ರಿಗುಣೋದಕಗಳನೆರೆಯುತಿ |
ಭಗವತ್ಪರಿಚಾರೆ ಮಾಯೆ ಬೆಳೆಯಿಸುತಿರ್ಪಳ್ ||
ಜಗದಶ್ವತ್ಥವ ಜೀವಿಗ |
ಳಘಪುಣ್ಯಗಳೆನಿಪ ಮೂಲಕಂದಗಳಿಂದಂ || ೧೩

ಎಂತಾ ಫಲರುಚಿಯೆರಡುಂ |
ಕೊಂತಂಬೊಲ್ ತಿವಿಯುದಂದು ಜೀವಂ ಚಲಿಕುಂ? ||
ಎಂತಾ ಕರ್ಮದ ಬೇರಿನ |
ಸಂತತಿ ಸಾಗದೆ ವಿವರ್ಧಿಕುಂ ವಿಶ್ವಕುಜಂ? || ೧೪

ಆದಿಯು ತೋರದ ಬೇರದು |
ಛೇದಿಸಲಹುದದನು ತತ್ತ್ವಬೋಧೆಯ ಛುರಿಯಿಂ ||
ಪಾದಪ ದಳ ಛದ ಸುಮ ಫಲ |
ಭೇದದ ಬುಡ ಮೊಂದೆಬೀಜಮೆನುವುದೆ ತತ್ತ್ವಂ|| ೧೫

ಮಾಯೆಯು ಪರೆ ಕಣ್ಗಮರಿರೆ |
ಹೇಯೋಪಾದೇಯ ರೂಪ ಬಂಧ ದ್ವೈಧಂ ||
ಆಯಾಸಂಗೊಳಿಪುದು ಡೋ |
ಲಾಯಿತನಂ ಗೈದು ನರನ ಸಂಸೃತಿಯಲೆಯೊಳ್|| ೧೬

ಮರುತಲ ರವಿಕಿರಣಗಳೊಂ |
ದುರುಯೋಗದಿನೊಗೆವಮೃಗಜಲಭ್ರಾಂತಿಯವೋಲ್
ಪರಸತ್ತ್ವದ ರೂಪಾಂಗೀ |
ಕರಣದಿನೆಸೆವೊಂದು ಶಕ್ತಿ ಮಾಯೆಯೆನಿಕ್ಕುಂ || ೧೭

ಆ ಮಾಯೆಯಿಂದೆ ಲೋಕದ |
ಕಾಮ್ಯಾಕಾಮ್ಯಪ್ರಕಾರಮದು ಸಂಸಾರಂ ||
ಯಾಮಲಮಧ್ಯದಿ ಜೀವ |
ಭ್ರಾಮಿತಮದು ಕರ್ಮಸೂತ್ರಜಾಲವಿಲಾಸಂ || ೧೮

ವಿಗಳಿತ ಮಾಯನ ಕಣ್ಗೀ |
ಜಗವೆಲ್ಲಮುಮೊಂದೆ ವಸ್ತು ಬೇರಿರದೊಂದುಂ ||
ಬಗೆಯನವಂ ನೀಂ ನಾಂಗಳ |
ಸೊಗದುಕ್ಕಗಳಘಶುಭಂಗಳೆಣಿಕೆಯುಮಂಗೇಂ || ೧೯

ಪರಿಹೃತಮಾಯನ ಕಣ್ಗೀ |
ಚರಾಚರಂ ಬ್ರಹ್ಮಸತ್ತ್ವಸಾಗರ ರೂಪಂ ||
ದುರಿತವದೇಂ ಸುಕೃತವದೇಂ |
ಪರಿದೃಶ್ಯಂ ಮಾಯೆ ತತ್ತ್ವಮಾತ್ಮೈಕತ್ವಂ || ೨೦

ಮಾಯಾತೀತಂ ನೋಳ್ಪಂ |
ಶ್ರೇಯಾಶ್ರೇಯಂಗಳೆಲ್ಲ ಲೆಕ್ಕಂಗಳುಮಂ ||
ಪ್ರೇಯಾರ್ಭಕರಾಟಗಳಂ |
ಜ್ಯಾಯಾಂಸಂ ನೋಳ್ಪ ತೆರದಿ ನಲ್ಮೆಯ ನಗುವಿಂ|| ೨೧

*

ಅಂತಾಮಾಯೆಯ ಪರಿಯಲ್ |
ಸಂತತದಾತ್ಮಾನುಶಿಕ್ಷಣಂ ಋಷಿವಿಹಿತಂ ||
ದಾಂತೇಂದ್ರಿಯಂಗೆ ಜೀವಿತ |
ದಂತಸ್ತತ್ತ್ವಂ ಕರಸ್ಥಮುಳಿದರ್ಗರಿದೈ || ೨೨

ಆ ಶಿಕ್ಷಣವೇ ಶ್ರುತಿಯುಪ |
ದೇಶಂ ತಾನದುವೆ ಸಕಲ ಶಾಸ್ತ್ರಾದೇಶಂ ||
ಔಷಧದೊಳ್ ಮಧುಕಟುಗಳ್ |
ಶೈಶವಿಗಳ್ಗೊಂದಿದಂತೆ ಧರ್ಮಾಭ್ಯಾಸಂ || ೨೩

ಮಾಯಾರಹಿತಂ ಪ್ರಾಜ್ಞಂ |
ಮಾಯಾವೃತರಂ ವಿದೂಷಿಸದೆ ತಾನವರಾ ||
ಶ್ರೇಯಃ ಪ್ರೇಯಂಗಳ ನನು |
ನಾಯನಗೊಳಿಸುವನದೊಂದು ತರತಮನಯದಿಂ|| ೨೪

ಪಾವಸೆಯ ಕೆಸರಿನೆಡೆಯೊಳ್ |
ಧಾವಿಪನೋರೊರ್ಮೆ ಜಾರಿಬೀಳುವುದರಿದೇಂ ? ||
ಭೂವ್ಯವಹಾರದಿ ನರಹೃ |
ದ್ಭಾವಿತಮಿಳಿದಂತು ಜಾರೆ ನಿಲ್ಲಿಪನು ಸಖಂ || ೨೫

ಬಾಲರ್ ಖೇಲನವಂ ಬರಿ |
ಕೇಳಿಯದೆನ್ನುವರೆ? ನೋಂಪಿಯೆನುವೊಲ್ ನಡೆವರ್||
ಲೀಲೆಯದೆನುವಾ ಪ್ರೌಢಂ |
ಲೀಲಾನಯದೊಳಮದೊಂದು ನೀತಿಯ ಕಲಿಪಂ ೨೬

ಶಮಮುಂ ದಮಮುಂ ಕ್ಷಮೆಯುಂ |
ಯಮಭಯಮುಂ ರಾಜ್ಯಶಾಸನೌದಾರ್ಯಗಳುಂ ||
ಸಮಯಾಚಾರಗಳುಂ ಸಂ |
ಯಮ ಸಾಧನವಲ್ತೆ ಜೀವಸಂಸ್ಕಾರಗಳೊಳ್ || ೨೭

ದಯೆಯಿಂ ನಿಯಮದೆ ವಿದ್ಯಾ |
ಶ್ರಯದಿಂ ವಾಣಿಜ್ಯ ಶಿಲ್ಪಕೃಷಿ ವೃತ್ತಿಗಳಿಂ ||
ಪ್ರಿಯಸರಸವಿನೋದಗಳಿಂ |
ನಯಗೊಳಿಸುವೆವಲ್ತೆ ಧರ್ಮ ಶಿಕ್ಷೆಗೆ ಜನಮಂ || ೨೮

ಪರಮೇಶಂ ನಿಯಮಿಸಿಹಂ |
ನರನಾರಿಯರೊರ್ವ ರೊರ್ವರನುಮಂ ತನ್ನೀ ||
ಧರೆಯುದ್ಯಾನದ ಗೆಯ್ಮೆಗೆ |
ಕಿರಿ ಬದು ಮಡಿಗಳವೊಲಲ್ಲಿ ಮನೆಯುಂ ನಾಡುಂ || ೨೯

ಒಡೆತನವವನದು ತೋಟದ |
ದುಡಿಮೆಯೆನತ್ತೆನುತವಂ ತೋರ್ದೆಡೆಯೊಳ್ ||
ಗಡುಸೆನ್ನದೆ ಮರಳೆನ್ನದೆ |
ದುಡಿಯುತಹಂಮತಿಯ ಸವೆಯಿಸುವನೈ ಜಾಣಂ ೩೦

ಉನ್ನತ ದೃಷ್ಟಿಗೆ ಕೀಳಿನ |
ದಿಣ್ಣೆಯುಮಿಳಿತಗ್ಗುಮೊಂದೆ ಸಮನೆನಿಸುವವೋಲ್ ||
ಪೂರ್ಣಜ್ಞಾನಿಯದೊಂದು ಸ |
ಮನ್ವಯನಯದಿಂ ಮನುಷ್ಯ ಚರಿತೆಯ ಕಾಣ್ಬಂ ೩೧

ಸ್ವೀಕೃತ ಸರ್ವಾತ್ಮನದೇಂ |
ಪ್ರಾಕೃತನವೊಲಿತರಜನರ ಕುಂದೆಣಿಸುವನೇಂ ||
ಸುಕೃತಂ ದುಷ್ಕೃತಮೆಂಬವು |
ವಿಕೃತಂಗಳ್ ಮಾಯೆಯೊಂದು ಮುಗಿಲಿನವೆನುವಂ ||

ಮೋಹಂ ದ್ವೇಷಂ ಶೋಕಂ |
ದೇಹಿಗಳೊಳ್ ಪ್ರಕೃತಿ ನೆಟ್ಟ ಕಂಟಕಲತೆಯಾ ||
ಸಾಹಸ್ರಮೂಲಿಗಳನಾರ್ |
ದಾಹಿಸುವಂ ಜನ್ಮಶತದೊಳೆಸಗದೆ ತಪವಂ || ೩೩

ಪರಿಯಿಸಿ ಮಾಯೆಯ ಪಟವಂ |
ಪರಮಾರ್ಥಾರ್ಜನೆಯ ಮಾರ್ಗದೊಳ್ ನಡೆಯಿಪ ಸಂ
ಸ್ಕರಣಮೆ ಪರತರ ಧರ್ಮಂ |
ಪುರುಷಂಗದರರಿವೆ ಭಾಗ್ಯಮದು ಕೃತಿಶಕ್ಯಂ || ೩೪

ಜ್ಞಾನಮೆ ಪೌರುಷವಿಜಯಂ |
ಮಾನಸ ಸಂಶುದ್ಧಿಯಿಂದಲಾತ್ಮಜ್ಞಾನಂ ||
ಮಾನವ ವಿವೇಕಮೇಳ್ದಿರೆ |
ಹಾನಂ ಮಾಯಾಪವಾದಚೇಷ್ಟೆಗೆ ಘಟಿಕುಂ || ೩೫

ಜನಧರ್ಮಂ ಬಹು ಕಾಲಗ |
ಳನುಭವದಿಂದೊಗೆದ ನೀತಿಯದು ಪಳಸಿ ಕೆಡಲ್ ||
ಮನುಜ ವಿವೇಕಂ ರಚಿಸುಗು |
ಮನುಪೂರ್ವಕ್ರಮದಿನೊಂದು ನವಪದ್ಧತಿಯಂ|| ೩೬

ಪುರುಷ ವಿವೇಕಂ ಪೂರ್ವಾ |
ಚರಣಂ ಲೋಕಪ್ರಯೋಗಮಿವು ಸರಿಗೂಡಲ್ ||
ತರು ಪಳೆ ಬೇರ್ಗಳನೂರುತೆ |
ಶಿರದೊಳ್ ಪೊಸತಳಿರ ತಳೆವವೋಲ್ ಶುಭಮಕ್ಕುಂ ||

ಪರಿವ ನದಿಯೊಂದು ನಿತ್ಯಂ |
ತೆರೆಗಳ್ ತಾಂ ಬೇರೆ ಬೇರೆ ಘಟ ವಿಘಟಿಯೊಳಂ ||
ಪುರುಷತೆಯುಂ ಧರ್ಮಮುಂ ಮಾ |
ತೆರದೊಳ್ ಪ್ರಾಚೀನ ನೂತ್ನ ಚಿರ ಸಂಮಿಲಿತಂ|| ೩೮

ಜೀವಂ ಪರಸತ್ತ್ವಾವಿ |
ರ್ಭಾವಂ ಗಡ ಜೀವಲೋಕ ಪರಿಪೋಷಣೆ ತಾಂ ||
ದೇವಾವತಾರಲೀಲಾ |
ಸೇವನ ಮಂತಾತ್ಮ ವಿಸ್ತರಣಮದು ಧರ್ಮಂ || ೩೯

ನಾನೆನ್ನದೆನಿಪ ಮಾಯಾ |
ಹ್ವಾನಕೆ ಕಿವಿಗುಡದೆ ಸರ್ವಮೀಶ್ವರ ವಿಭವಂ ||
ನಾನೊಳಗದಿಂ ಬಾಳುವೆ |
ನಾನಂದಿಪೆನವನ ವರದಿನೆನುವಂ ಪ್ರಾಜ್ಞಂ || ೪೦

ಕ್ಷೀಣಾಖಿಲ ಮಾಯಂ ತಾಂ |
ಕಾಣುವನೆಲ್ಲರನುಮಾತ್ಮ ರೂಪಗಳೆನುವೊಲ್ ||
ಜ್ಞಾನಾಮೃತ ಜೀವಿಯುವಂ |
ಲೀನಂ ವಿಶ್ವಾಂತರಾತ್ಮ ಜಲಧಿಯೊಳನಿಶಂ || ೪೧

ತೋಯಧಿಯಿನೇಳ್ದ ವೀಚಿಕೆ |
ವಾಯುವಿನೊಡನಾಡಿ ಕುಣಿದು ಕಡಲನೆ ಪುಗುವೊಲ್
ಮಾಯೆಯೊಡನಾಡಿ ಜೀವಂ |
ಲೀಯ್ಮಂ ತಾನಹುದು ಮರಳಿ ಪರವಸ್ತುವಿನೊಳ್ ೪೨

ನಿಖಿಲ ಪ್ರಪಂಚ ಲಕ್ಷ್ಯಂ |
ಸುಖಮೆಂಬುದು ಲೋಕಭೋಗಮದು ಭಯಮಿಶ್ರಂ
ಸುಖದುಃಖಂಗಳನಂತ |
ಮುಖಿ ದಾಂಟುತೆ ಪಡೆವನಭಯ ಶಾಂತಿಯ ಪದವಂ

ತಳೆದೊಳಗೀಶಸ್ಮೃತಿಯಂ |
ತೊಳಲುತೆ ಬಾಹ್ಯದಲಿ ಲೋಕಜೀವಿತಪಥದೊಳ್ ||
ತಿಳಿವುಂ ನಲಿವುಂ ಕೂಡಿದ |
ಬೆಳಕಿಳೆಗೆನಿಪ ಯಮಿಗೆ ಬಾಳುವೆ ಹೊರೆಯೇಂ || ೪೪

ಈ ನಂಬುಗೆಯಿಂ ಮಾರುತಿ |
ನಾನೆಸಗಿದೆನೆಲ್ಲ ಲೌಕಿಕದ ಕಜ್ಜಗಳಂ ||
ಜ್ಞಾನದ ಶಿಖರದಿನೆನ್ನಂ |
ಮಾನುಷ್ಯತೆ ಜಾರಿಸಿರ್ದೊಡದನೆಣಿಸದಿರೈ || ೪೫

ಮ|| ಇಂತಾ ಸ್ವಾಮಿಯುಪದೇಶಂಗೆಯೆ ಸಂತುಷ್ಟಾಂತರಂಗ
ನಾದಾ ಹನೂಮಂತನಿಂತೆಂದಂ— ೪೬

ಗುರುದೇವ ನಿನ್ನ ಚರಿತೆಯ |
ಪರಿಶೋಧಿಸೆ ನಾನೆ? ನಿನ್ನ ಕಿಂಕರನಲ್ತೇಂ? ||
ಸ್ಮರಿಸುತೆ ನಿನ್ನಂ ತತ್ತ್ವದ |
ಪರಿನಿಷ್ಠೆಯೊಳರಸುವೆಂ ಪ್ರಶಾಂತಿಯ ನೆಲೆಯಂ|| ೪೭

ಪುರುಷತೆಯೊಳು ನೀಂ ಬೆಳಗಿದೆ |
ಪರಸತ್ತ್ವದ ಪರಿಯ ದೇವ ಲೋಗರ್ ನಿನ್ನೀ ||
ಚರಿತೆಯ ದೀಪದೆ ತಂತ |
ಮ್ಮಿರವಂ ಬೆಳಗಿರಲು ಜೀವಿತಂ ವರಮಲ್ತೇ || ೪೮

ವಾಲ್ಮೀಕಿಗಿರಿಸಂಭೂತಾ ರಾಮಸಾಗರಗಾಮಿನೀ |
ಪುನಾತು ಭುವನಂ ಪುಣ್ಯಾ ರಾಮಾಯಣಮಹಾನದೀ ||

# ಟಿಪ್ಪಣಿ

| ಪುಟ | ಪದ್ಯ | ಪದ | ಅರ್ಥ |
|---|---|---|---|
| ೧೧ | ೭ | ಬೇವಸ | ಕುದಿತ |
| | ೮ | ನಾಣ್ | ನಾಚಿಕೆ |
| | | ಸಧರ್ಮಿತೆ | ಒಂದೇ ಧರ್ಮವಿರುವಿಕೆ |
| ೧೨ | ೯ | ಸವರು | ಕಡಮೆಮಾಡು |
| ೧೩ | ೧೧ | ಕಿಣ್ವ | ಮತ್ತನ್ನುಂಟು ಮಾಡುವ ಮೂಲಿಕೆ |
| ೧೪ | ೧೪ | ಪೊಳ್ಗು | ಬಾಗು |
| | | ಕತ | ಕಾರಣ |
| ೧೫ | ೧೮ | ಅನೃಜು | ಸೊಟ್ಟು |
| ೧೬ | ೧೯ | ಮುಷಿತ | ಕದಿಯಲ್ಪಟ್ಟ |
| | | ತರ್ಷ | ದಾಹ, ಅಪೇಕ್ಷೆ |
| ೧೭ | ೨೩ | ಕಣ್ಣಡೆ | ಕುದುರೆಯ ಮುಖದ ಪಕ್ಕಪಟ್ಟಿ |
| ೨೮ | ೨೭ | ಎಲರು | ಗಾಳಿ |
| | ೨೮ | ಅಪತರ್ಕ | ಸರಿಯಲ್ಲದ ಅನುಮಾನ |
| ೨೯ | ೨೯ | ನಿಷ್ಕೃತಿ | ಪ್ರಾಯಶ್ಚಿತ್ತ, ಪರಿಹಾರ |
| | | ಸಾಂತ್ವ | ಸಮಾಧಾನ |
| | | ರಕ್ತಿ | ಆಸಕ್ತಿ |
| | | ಪೃಚ್ಛೆ | ಪ್ರಶ್ನೆ, ಸವಾಲು |
| ೩೦ | ೩೩ | ಮಾತುಲ | ಸೋದರಮಾವ |
| ೩೨ | ೧ | ದೂನ | ಸುಟ್ಟ, ದಗ್ಧ |
| | ೩ | ಮೃತ್ಸ್ನ | ಮಣ್ಣು |
| ೩೩ | ೫ | ನಿಗಳ | ಸಂಕೋಲೆ, ಬೇಡಿ |

| | | | |
|---|---|---|---|
| ೩೪ | ೮ | ಭಸ್ತ್ರಿ | ತಿದಿ, ತೊಗಲುಚೀಲ |
| | ೯ | ನಿರ್ವೃತಿ | ಶಾಂತಿ ಸುಖ, ಬಿಡುಗಡೆ |
| ೩೭ | ೨ | ವಿಶಯಾಂದೋಲಿತ | ಸಂದೇಹದಿಂದ ಓಲಾಡುವ |
| ೪೧ | ೩೯ | ಮೋಕ | ಪೊರೆ |
| ೪೨ | ೪೩ | ನಾಣ್ನುಡಿ | ನಾಚಿಕೆಯ ಮಾತು |
| ೪೯ | ೨೧ | ಅಭಿಶಂಸನ | ದೋಷಾರೋಪಣೆ, ನಿಂದೆ |
| ೩೬ | ೮ | ಅತೀಂದ್ರಿಯಾರ್ಥಂ | ಇಂದ್ರಿಯಗಳ ಅಳತೆಗೆ ಮೇಲ್ಪಟ್ಟ, ಎಂದರೆ ಸಿಕ್ಕಲಾರದ ವಿಷಯ |
| ೫೯ | ೨೫ | ಪಾವಸೆ | ಪಾಚಿ |

# ಉಮರನ ಒಸಗೆ

★

## ಡಿ. ವಿ. ಗುಂಡಪ್ಪನವರಿಂದ

---

**ಪುಟ: ೧೨೯ (ಎರಡನೆಯ ಮುದ್ರಣ)** ಅನೇಕ ಚಿತ್ರಗಳು

ಸಾದ ಪ್ರತಿ ರೂ. **ರೂ. ೧–೮–೦;** ಭಂಡಾರದ ಪ್ರತಿ **ರೂ. ೩.**

---

ಪ್ರಸಿದ್ಧ ವಿದ್ವಾಂಸರೂ, ಕವಿಗಳೂ, ಶೋಧಕರೂ ಆದ ಶ್ರೀಮಾನ್ **ಗೋವಿಂದ ಪೈ,** ಅವರು ಹೀಗೆ ಬರೆದಿದ್ದಾರೆ (ಮೊದಲನೆಯ ಮುದ್ರಣ ಹೊರಟಂದು) :—

In this excellent illustrated edition, the poem looks like that Persian lady-love who—

" Beside me singing in the wilderness,
And wilderness is Paradise enow !"

—or with whom Omar would fain shatter to bits this sorry scheme of things and then " re-mould it nearer to the heart's desire !" For does it not wear her multi-coloured transparent veils? Is it not sweet and beautiful like her? Has it not the glory of poetry to match her glory of youth?

ಶ್ರೀಮಾನ್ **ಜಿ. ಪಿ. ರಾಜರತ್ನಂ**— ('ಕನ್ನಡ ನುಡಿ' ೧೫–೬–೪೫)

**" ಈಚೆಗೆ ಇವರ ರುಬಾಯಿಗಳ ಸಂಖ್ಯೆ ೬೪ರಿಂದ ೧೭೨ಕ್ಕೆ ಬೆಳೆದು, ಎಪ್ಪತ್ತು ಪುಟಗಳ ವಿದ್ವತ್‌ಪೂರ್ಣ ಮುನ್ನುಡಿಯೊಡನೆ ೧೯೪೪ರಲ್ಲಿ ಪ್ರಕಟವಾಗಿದೆ....ಪದ್ಯರಚನೆಯಲ್ಲಿ ಯಾವ ಪದ ಉಚಿತ, ಪದಗಳ ಜೋಡಣೆಯಲ್ಲಿ ಯಾವ ಕ್ರಮ ಯುಕ್ತ, ಪಾದಗಳ ಪಲ್ಲಟದಿಂದ ಏನು ಅರ್ಥ ವ್ಯತ್ಯಾಸ ಮುಂತಾದ ಸಾಹಿತ್ಯಪಾಠಗಳು ಅನೇಕವನ್ನು ಅಭ್ಯಾಸಮಾಡಲು ಡಿ. ವಿ. ಜಿ. ಅವರ 'ಉಮರನ ಒಸಗೆ'ಯ ಎರಡು ಆವೃತ್ತಿಗಳು ಸಹಾಯವಾಗುತ್ತವೆ".**

## ಮ್ಯಾಕ್ ಬೆತ್

**ಡಿ. ವಿ. ಗುಂಡಪ್ಪನವರಿಂದ**

ಷೇಕ್ಸ್‌ಪಿಯರ್ ಕವಿಯ ರುದ್ರ ನಾಟಕದ ಕನ್ನಡ ರೂಪ.

**ಪುಟ: ೧೭೭ ಬೆಲೆ: ಒಂದು ರೂಪಾಯಿ**

## ವಿದ್ಯಾರಣ್ಯ ವಿಜಯ

**ಡಿ. ವಿ. ಗುಂಡಪ್ಪನವರಿಂದ**

**ದೇಶಭಕ್ತಿ ಧರ್ಮೋತ್ಸಾಹ ಪ್ರಭಾವದ ನಾಟಕ**

**ಪುಟ: ೧೬೦ ಬೆಲೆ: ರೂ. ೨-೦-೦**

---

## ಸರೋಜ ನಳಿನಿ

**ಶ್ರೀಮತಿ ಜಯಲಕ್ಷ್ಮಿ ಶ್ರೀನಿವಾಸನ್ ಅವರಿಂದ**

ಶ್ರೀ ಜಿ.ಎಸ್. ದತ್, ಐ.ಸಿ.ಎಸ್. ಅವರ ಪತ್ನಿಯಾಗಿದ್ದು, ಸಮಾಜೋದ್ಧಾರಕ್ಕಾಗಿ ಶ್ರಮಿಸಿದ ಸಾಧ್ವೀಮಣಿಯ ಜೀವನ ಚರಿತ್ರೆ.

ಈ ಗ್ರಂಥವನ್ನು ನಮ್ಮ ಹೆಣ್ಣು ಮಕ್ಕಳು ಮಾತ್ರವಲ್ಲದೆ ಎಲ್ಲರೂ ಅಗತ್ಯವಾಗಿ ಓದಬೇಕು.

ಎರಡು ಚಿತ್ರಗಳಿವೆ. **ಬೆಲೆ ರೂ. ೧**

## ದೀಪಾವಳಿ ಮತ್ತು ಇತರ ಕಥೆಗಳು

**ಶ್ರೀಮತಿ ಜಯಲಕ್ಷ್ಮಿ ಶ್ರೀನಿವಾಸನ್ ಅವರಿಂದ**

ನಮ್ಮ ಸಮಾಜದ ನಡು ಅಂತಸ್ತಿನ ಜೀವನದಲ್ಲಿಯ ಮೃದುವೂ ಸುಕುಮಾರವೂ ಆದ ಪ್ರಕರಣಗಳನ್ನು ಸಹಾನುಭೂತಿಯಿಂದ ನೋಡಿ ವರ್ಣಿಸಿರುವ ಹದಿನೇಳು ಸಣ್ಣ ಕಥೆಗಳಿವೆ.

**ಪುಟ: ೧೩೩ ಬೆಲೆ: ರೂ. ೧-೪-೦.**